**OFFICE OF THE ASSISTANT COMMISSIONER OF COMMERCIAL TAXES,**
**LOCAL VAT OFFICE-270, MANGALORE**
**NOTIFICATION**
**Notified Authority Under Rule 6(i) of the CST (Karnataka) Rules 1957**
**No.ACCT/LVO-270/CR-/09-10, Dated:22nd December, 2009**

By virtue of the provision of Rule 12(2) of the CST (Registration & turnover) Rules 1957 and Rule 6(e) and 6(i) of CST (Karnataka) Rules 1957, it is hereby notified for general information that the declarations in Form-C described below is declared to be lost while in transit.

| Sl. No. | Number (including code No.) of declaration Forms Lost/ Destroyed or stolen | Name and address of the dealer to whom declaration Forms/ is/are issued by the department, with date of "C" Form issue | Registration Certificate No. of the dealer under CST Act 1956 | The Address of the dealer to whom the declaration is/ are sent | Date of issue of Forms by the dealer | Whether Lost/ Stolen/ Destroyed | Remarks |
|---|---|---|---|---|---|---|---|
| 1. | "C" Forms No.TCK 2306023 | M/s Mohtisham Builders & Developers, Mangalore | TIN: 29730391248 | Esco Sanitation Wazirpur Industrial Area, New Delhi TIN:7376283 | 22.09.2008 | Lost | - |
| 2. | TCK 2306024 | -do- | -do- | -do- | -do- | -do- | |

**A.M. SOMASHEKHARIAHA**
Asst. Commissioner of Commercial Taxes,
Local Vat Office-270, Mangalore.

PR-1354

**ಸಹಕಾರ ಇಲಾಖೆ**
**ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ**
**ನಂ.ಡಿಆರ್‌ಡಿ:ಎಲ್‌ಕ್ಯೂಡಿ:ಸಿಆರ್:20:2009–10, ದಿನಾಂಕ:7ನೇ ಡಿಸೆಂಬರ್, 2009**

**ವಿಷಯ:** ಸ್ಥಗಿತಗೊಂಡಿರುವ ವಾಣಿ ವಿಲಾಸ ಸಾಗರ ಜಲಾಶಯ ನೀರು ಬಳಕೆದಾರರ ಸಹಕಾರ ಸಂಘ ನಿ., ರಂಗನಾಥಪುರ ಹಿರಿಯೂರು ತಾಲ್ಲೂಕು ಇದನ್ನು 1959 ನೇ ಕ.ಸ.ಸಂ.ಕಾ. ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ವಿಚಾರ.

**ಉಲ್ಲೇಖ:**1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂಖ್ಯೆ: ಸನಿ:30:ಸಿಆರ್:33/08–09, ದಿನಾಂಕ:28.07.2009.

2) ಈ ಕಛೇರಿಯ ಕಾರಣ ಕೇಳಿ ನೋಟೀಸು ಸಮ ಸಂಖ್ಯೆ: ದಿನಾಂಕ:30.09.2009.

3) ಜಾರಿಗಾರ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಚಿತ್ರದುರ್ಗ ಇವರ ಪತ್ರ ದಿನಾಂಕ:16.11.2009.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ವಾಣಿ ವಿಲಾಸ ಸಾಗರ ಜಲಾಶಯ ನೀರು ಬಳಕೆದಾರರ ಸಹಕಾರ ಸಂಘ ನಿ., ರಂಗನಾಥಪುರ ಹಿರಿಯೂರು ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ: ಸನಿ:30/70.ಆರ್.ಜಿ.ಎಸ್/30479/2000–01 ದಿನಾಂಕ:24.02.2001 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನಃಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2)ರ ನೋಟೀಸನ್ನು ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿಯಾದ ಬಗ್ಗೆ ಉಲ್ಲೇಖ (3)ರಲ್ಲಿ ಸ್ವೀಕೃತಿ ಈ

ಕಛೇರಿಗೆ ತಲುಪಿದೆ, ಆದಾಗ್ಯೂ ಅವರು ಯಾವುದೇ ಸಮಜಾಯಿಷಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಇದರಿಂದ ಸಂಘವು ಪುನಃಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ವಾಣಿ ವಿಲಾಸ ಸಾಗರ ಜಲಾಶಯ ನೀರು ಬಳಕೆದಾರರ ಸಹಕಾರ ಸಂಘ ನಿ. ರಂಗನಾಥಪುರ ಹಿರಿಯೂರು ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಅನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಹಿರಿಯೂರು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇವೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:07.12.2009 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್.1357

**PROCEEDINGS OF THE ASSISTANT COMMISSIONER OF COMMERCIAL TAXES, LOCAL VAT OFFICE-270, MANGALORE, DATED:22ND DECEMBER, 2009**

**Present: A.M. Somashekhariah, ACCT (LVO-270), Mangalore.**

**Subject:** Loss of seven “C” Form in case of M/s The central Arecanut & Cocoa Marketing & Processing Co-Operative Ltd., Varanashi towers, Mission Street, Mangalore.

**Read:** Letter Dated:15.12.2009 of M/s The Central Arecanut & Cocoa Marketing & Processing Co-Operative Ltd., Varanashi Towers, Mission Street, Mangalore.

**Preamble:**

Central Arecanut & Cocoa Ltd., Varanashi Towers, Mission Street, Mangalore is a registered dealer borne on the files of this office bearing TIN No. 29760094557. The dealer in his letter cited at read above has intimated that Seven “C” Forms bearing Sl.No.TCK-R 3806540, 3806541, 3806542, 3806543, TCK-R 3815679, 3815680, TCK-R 3806573 issued by this office are lost in the course of transit by the dealer M/s Godhavari Cocoa Traders, Eluru, Andhra Pradesh.

M/s Central Areacanut & Cocoa Marketing & Processing Co-Operative Ltd., Varanashi Towers, Mission Street, Mangalore has produced the proof for having filed the complain to Police Authorities and executed indemnity bond Dated:15.12.2009 in favour of the Government as laid down under Rule 12(2) and 12(9) of CST Act 1956.

Since the Seven “C” form filled bearing Sl.No.TCK-R 3806540, 3806541, 3806542, 3806543, TCK-R 3815679, 3815680, TCK-R 3806573 are to be treated as lost in transit and are to be treated as invalid. Hence this order.

**Order No.ACCT/LVO-270/CR-4/2009-10, Dated:23rd December, 2009**

In view of the Circumstances explained above the filled Seven “C” Forms bearing Sl.No.TCK-R 3806540, 3806541, 3806542, 3806543, TCK-R 3815679, 3815680, TCK-R 3806573 issued by this office on 21.08.2007 are treated as lost in transit by the dealer M/s Godavari Cocoa Traders, Eluru, Andra Pradesh.

**A.M. SOMASHEKHARIAHA**
Asst. Commissioner of Commercial Taxes,
Local Vat Office-270, Mangalore.

**OFFICE OF THE ASSISTANT COMMISSIONER OF COMMERCIAL TAXES,**
**LOCAL VAT OFFICE-270, MANGALORE**
**NOTIFICATION**
**Notified Authority Under Rule 6(i) of the CST (Karnataka) Rules 1957**
**No.ACCT/LVO-270/CR/09-10, Dated:23rd December, 2009**

By virtue of the provision of Rule 12(2) of the CST (Registration & turnover) Rules 1957 and Rule 6(e) and 6(i) of CST (Karnataka) Rules 1957, it is hereby notified for general information that the declarations in Form-C described below is declared to be lost while in transit.

| Sl. No. | Number (including code No.) of declaration Forms Lost/ Destroyed or stolen | Name and address of the dealer to whom declaration Forms/ is/are issued by the department, with date of "C" Form issued | Registration Certificate No. of the dealer under CST Act 1956 | The Address of the dealer to whom the declaration is/ are sent | Date of issue of Forms by the dealer | Whether Lost/ Stolen/ Destroyed | Remarks |
|---|---|---|---|---|---|---|---|
| 1. | "C" Forms No. Sl.No.TCK-R 3806540,3806541, 3806542,3906543, TCK-R 3815679, 3815680, TCK-R 3806573 | M/s The Central Arecanut & Cocoa Marjeting & Processing Co-Operative Ltd., Varanashi Towers, Mission Street, Mangalore. | TIN: 29760094557 | Godhavari Cocoa Traders Eleuru, Andra Pradesh | | Lost | |

**Encl:**
1) Ltr.of M/s Campco Ltd., Mangalore, Dated:15.12.2009.
2) Indemnity Bond In Form-G-2 Sets.
3) Police complaint Copy Dated:16.11.2009
4) Paper Advertisment copy
5) Ltr. Of Comml.Tax Officer Eluru, A.P. Dated:10.09.2009.

**A.M. SOMASHEKHARIAHA**
Asst. Commissioner of Commercial Taxes,
Local Vat Office-270, Mangalore.

PR-1361

**OFFICE OF THE 11TH ADDL. CHIEF METRO POLITON MAGISTRATE,**
**BANGALORE CITY DRAFT NOTIFICATION**

It is hereby notified to the general public that the following unclaimed vehicles are in the custody as Ashoknagar Police Station, Bangalore City which are seized under various cases.

| Sl. No. | Crime No. & Sec. | P.F.No. | Chassis No. & Engine No. |
|---|---|---|---|
| 1. | C.Misc. 196/09 | 78/09 | 1) Bajaj Pulsar 150 cc Motor Cycle, KA-50-E-402, Black colour, Chassis No. MD2DHDHZZNCC71006, Eng. No. DHGBNC07764. |
| | | | 2) Honda Activa KA-04-EJ8292, Golden Yellow colour, Chassis No. ME4JF085F28080393, Eng. No. JF08E0082669 |
| | | | 3) T.V.S. Victor Motor Cycle, KA-01-V6865, Blue colour, Chas.No. N3307F598805, Eng.No. N3307M599357 |

| Sl. No. | Crime No. & Sec. | P.F.No. | Chassis No. & Engine No. |
|---|---|---|---|
| | | | 4) T.V.S. XL Super Mophed KA-03-EU930, Green colour<br>Chas.No. MD621AD1562A98448,<br>Eng.No. MD621AD1562A98448. |
| | | | 5) Bajaj Pulsar Motor Cycle KA-01-X809, Black colour<br>Chas.No. DHVBLE36385,<br>Eng.No. DHGBLE35604. |
| | | | 6) Bajaj Kawasaki Boxer M/cycle KA-05-EE-2975, Black colour<br>Chas.No. DFFBGM95183,<br>Eng.No.DFMBGM24231. |
| | | | 7) Yamaha RX-100 M/cycle TN-22-Q9884, Black colour<br>Chas.No. 04A-IL7019184<br>Eng.No.IL7019184. |

Any persons having right to claim the above vehicles shall approach the Ashoknagar Police Station with necessary document within one months from the date of publication any filling which the above vehicle will confiscated to Government.

Any claims received after the due date will not be entertained.

Addl. Chief Metropolitan Magistrate,
Mayo hall, Bangalore.

PR-1296

**ಕೃಷಿ ಆಯುಕ್ತರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಜಂಟಿ ಕೃಷಿ ನಿರ್ದೇಶಕರು ಕೋಲಾರ ರವರು ದಿನಾಂಕ:30.06.2003 ರಂದು ಸಹಾಯಕ ಕೃಷಿ ನಿರ್ದೇಶಕರು ಶ್ರೀನಿವಾಸಪುರ ಕಛೇರಿಗೆ ಅನಿರೀಕ್ಷಿತ ಭೇಟಿ ಹಾಗೂ ಸಿಬ್ಬಂದಿ ಗೈರು ಹಾಜರಿ ಬಗ್ಗೆ ಶಿಸ್ತುಕ್ರಮ.

**ಓದಲಾಗಿದೆ:** 1) ಜಂಟಿ ಕೃಷಿ ನಿರ್ದೇಶಕರು, ಕೋಲಾರ ರವರ ಪತ್ರಸಂಖ್ಯೆ: ಜಕೃನಿ/ಕೋ/ ವಿಚಾರಣೆ/ ಅಧೀಕ್ಷಕರು/ ಶ್ರೀಪುರ/2003–04/705, ದಿನಾಂಕ:04.07.2003.

2) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಕೋಲಾರ ರವರ ಆದೇಶ ಸಂಖ್ಯೆ: ಜಿಪಂಕೋ/ಇಎಸ್‌ಟಿ–3/ಸಿಸಿಎ/29/2003–04, ದಿನಾಂಕ:05.07.2003, 18.10.2003 ಮತ್ತು 01.03.2004.

3) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಕೋಲಾರ ರವರ ಆದೇಶ ಸಂಖ್ಯೆ: ಜಿಪಂಕೋ/ಸಿಬ್ಬಂದಿ–3/ಸಿಸಿಎ/29/2003–04, ದಿನಾಂಕ:24.01.2007.

4) ಸರ್ಕಾರದ ಆದೇಶ ಸಂಖ್ಯೆ: ಕೃತೋಇ 195 ಕೃಪಸೇ 2007, ದಿನಾಂಕ:18.08.2007.

5) ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–2/09/2003–04, ದಿನಾಂಕ:23.09.2009, 2ನೇ ಕಾರಣ ಕೇಳುವ ಸೂಚನಾ ಪತ್ರ ಜಾರಿ.

6) ಶ್ರೀ ಟಿ.ಆರ್. ರಾಜಗೋಪಾಲ್, ದ್ವಿತೀಯ ದರ್ಜೆ ಸಹಾಯಕ ಇವರ ಸ್ವೀಕೃತಿ ಪತ್ರ ದಿನಾಂಕ:06.09.2009 ಹೇಳಿಕೆ ದಿನಾಂಕ:15.10.2009.

**ಪ್ರಸ್ತಾವನೆ:**

ದಿನಾಂಕ:30.06.2003 ರಂದು ಜಂಟಿ ಕೃಷಿ ನಿರ್ದೇಶಕರು, ಕೋಲಾರ ಇವರು ಸಹಾಯಕ ಕೃಷಿ ನಿರ್ದೇಶಕರು ಶ್ರೀನಿವಾಸಪುರ ಕಛೇರಿಗೆ ಅನಿರೀಕ್ಷಿತ ಭೇಟಿ ನೀಡಿದಾಗ ಕಛೇರಿಯ ಸಿಬ್ಬಂದಿಯಾದ ಶ್ರೀ ಎಂ.ವಿ. ವನಕೇರಿ, ಕೃಷಿ ಸಹಾಯಕ ಶ್ರೀ ಶಿವಕುಮಾರ್ ಕೃಷಿ ಸಹಾಯಕ ಮತ್ತು ಶ್ರೀ ಟಿ.ಆರ್. ರಾಜಗೋಪಾಲ್, ದ್ವಿತೀಯ ದರ್ಜೆ ಸಹಾಯಕ ಇವರುಗಳು ಅನಧಿಕೃತ ಗೈರು ಹಾಜರಿಯಾಗಿರುತ್ತಾರೆ. ದಿನಾಂಕ:04.07.2003 ರಂದು ಜಿಲ್ಲಾ ಪಂಚಾಯತ್ ಸಭಾಂಗಣದಲ್ಲಿ ನಡೆದ ಕ್ಯಾಬಿನೆಟ್ ಸಭೆ ಕಮಿಟಿ ಬರಪರಿಹಾರ ಕಾಮಗಾರಿ ಪ್ರಗತಿ ಪರಿಶೀಲನಾ ಸಭೆಯ ತೀರ್ಮಾನದಂತೆ ಇವರುಗಳ ವಿರುದ್ಧ ಶಿಸ್ತಿನ

ಕ್ರಮಕೈಗೊಳ್ಳಲು ಜಂಟಿ ಕೃಷಿ ನಿರ್ದೇಶಕರು, ಕೋಲಾರ ರವರು ಪ್ರವಾಸದ ಟಿಪ್ಪಣಿಯೊಂದಿಗೆ ಓದಲಾದ ಕ್ರಮಸಂಖ್ಯೆ (1)ರಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಕೋಲಾರ ರವರಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಕೋಲಾರ ರವರು ಸದರಿ ನೌಕರರುಗಳನ್ನು ಅನಧಿಕೃತ ಗೈರು ಹಾಜರಿ ಆರೋಪದ ಮೇಲೆ ಓದಲಾದ ಕ್ರಮಸಂಖ್ಯೆ (2)ರಲ್ಲಿ ವಿಚಾರಣೆ ಬಾಕಿ ಇರಿಸಿ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ. ಸದರಿ ನೌಕರರನ್ನು ಸೇವೆಗೆ ಪುನರ್ ನೇಮಕ ಮಾಡಲಾಗಿದೆ. ಇವರುಗಳ ವಿರುದ್ಧ ನಿಯಮಾನುಸಾರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾಗಳು 1957ರ ನಿಯಮ 11ರಡಿಯಲ್ಲಿ ದೋಷಾರೋಪಣೆ ಪಟ್ಟಿ ಜಾರಿ ಮಾಡಿ ವಿಚಾರಣೆ ಕೈಗೊಂಡಿರುತ್ತಾರೆ. ವಿಚಾರಣಾ ವರದಿಯಲ್ಲಿ ಶ್ರೀ ಎಂ.ವಿ. ವನಕೇರಿ, ಕೃಷಿ ಸಹಾಯಕ, ಶ್ರೀ ಶಿವಕುಮಾರ, ಕೃಷಿ ಸಹಾಯಕ ಇವರ ಮೇಲಿನ ಆರೋಪವು ಸಾಬೀತಾಗಿರುವುದರಿಂದ ದಂಡನೆ ವಿಧಿಸಿದೆ. ಶ್ರೀ ಟಿ.ಆರ್. ರಾಜಗೋಪಾಲ್, ದ್ವಿತೀಯ ದರ್ಜೆ ಸಹಾಯಕ ಇವರು ಖಾಯಂ ಪೂರ್ವ ಸೇವಾ ಅವಧಿಯಲ್ಲಿಯೇ ದಿನಾಂಕ:07.03.2003 ರಿಂದ 30.09.2006 ರವರೆಗೆ ದೀರ್ಘ ಅವಧಿಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾಗಿರುವುದರಿಂದ ವಿಚಾರಣಾ ಸಮಯದಲ್ಲಿ ಆರೋಪವು ದೃಢಪಟ್ಟಿರುತ್ತದೆ.

ಓದಲಾದ ಕ್ರಮಸಂಖ್ಯೆ (3)ರ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಕೋಲಾರ ರವರ ಆದೇಶದಲ್ಲಿ ಆರೋಪಿತ ನೌಕರರಾದ ಶ್ರೀ ಟಿ.ಆರ್. ರಾಜಗೋಪಾಲ್, ದ್ವಿತೀಯ ದರ್ಜೆ ಸಹಾಯಕ, ಸಹಾಯಕ ಕೃಷಿ ನಿರ್ದೇಶಕರು, ಶ್ರೀನಿವಾಸಪುರ ಇವರನ್ನು ಖಾಯಂಪೂರ್ವ ಸೇವಾ ನಿಯಮಾವಳಿಗಳ ನಿಯಮದಡಿಯಲ್ಲಿ ಸೇವೆಯಿಂದ ವಜಾಗೊಳಿಸಲು ಸರ್ಕಾರಕ್ಕೆ ವರದಿ ಸಲ್ಲಿಸಲಾಗುವುದು ಎಂದು ತಿಳಿಸಿ ಪ್ರಸ್ತಾವನೆಯನ್ನು ಇಲಾಖೆಗೆ ಸಲ್ಲಿಸಿರುತ್ತಾರೆ.

ಶ್ರೀ ಟಿ.ಆರ್. ರಾಜಗೋಪಾಲ್, ದ್ವಿತೀಯ ದರ್ಜೆ ಸಹಾಯಕ, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಶ್ರೀನಿವಾಸಪುರ ಇವರು ದಿನಾಂಕ:07.03.2003 ರಿಂದ 30.09.2006 ರವರೆಗೆ ಅನಧಿಕೃತ ಗೈರು ಹಾಜರಿ ಆರೋಪದ ಬಗ್ಗೆ ಇವರನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಕೋಲಾರ ರವರು ದಿನಾಂಕ:05.07.2003 ರ ಆದೇಶ ಸಂಖ್ಯೆ: ಜಿಪಂಕೋ/ ಇಎಸ ಟಿ–3/ ಸಿಸಿಎ/29/2003–04 ರಲ್ಲಿ ಇಲಾಖಾ ವಿಚಾರಣೆ ಕಾಯ್ದಿರಿಸಿ ಅಮಾನತ್ತಿನಲ್ಲಿಡಲಾಗಿದ್ದು, ದಿನಾಂಕ:01.03.2004ರ ಮೂಲಕ ಸಹಾಯಕ ಕೃಷಿ ನಿರ್ದೇಶಕರು, ಶ್ರೀನಿವಾಸಪುರ ಕಛೇರಿಗೆ ದ್ವಿತೀಯ ದರ್ಜೆ ಸಹಾಯಕ ಹುದ್ದೆಗೆ ಅಮಾನತ್ತು ತೆರವುಗೊಳಿಸಿ ನೇಮಿಸಿದೆ. ನಿಯಮಾನುಸಾರ ಸಿಸಿಎ ನಿಯಮ 11 ರಡಿಯಲ್ಲಿ ವಿಚಾರಣೆ ಕೈಗೊಂಡಿರುತ್ತಾರೆ. ವಿಚಾರಣಾ ವರದಿಯಲ್ಲಿ ಇವರ ವಿರುದ್ಧ ಅನಧಿಕೃತ ಗೈರು ಹಾಜರಿ ಆರೋಪ ಸಾಬೀತಾಗಿರುತ್ತದೆ.

ಶ್ರೀ ಟಿ.ಆರ್. ರಾಜಗೋಪಾಲ್ ರವರು ದಿನಾಂಕ:16.12.1989 ರಂದು ದ್ವಿತೀಯ ದರ್ಜೆ ಸಹಾಯಕ ಹುದ್ದೆಗೆ ನೇಮಕಾತಿ ಹೊಂದಿ ಸರ್ಕಾರಿ ಸೇವೆಗೆ ಹಾಜರಾಗಿರುತ್ತಾರೆ. ಸದರಿ ನೌಕರರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ ದಿನಾಂಕ:18.08.2007 ರಂದು ಓದಲಾದ ಕ್ರಮಸಂಖ್ಯೆ (4)ರಲ್ಲಿ ಸರ್ಕಾರದ ಆದೇಶದಲ್ಲಿ ಘೋಷಿಸಲಾಗಿದೆ.

ವಿಚಾರಣಾ ವರದಿಯಲ್ಲಿ ಅನಧಿಕೃತ ಗೈರು ಹಾಜರಿ ಆರೋಪ ಸಾಬೀತಾದ ಹಿನ್ನೆಲೆಯಲ್ಲಿ ಓದಲಾದ ಕ್ರಮಸಂಖ್ಯೆ (5)ರಲ್ಲಿ ವಿಚಾರಣಾ ವರದಿಯೊಂದಿಗೆ 2ನೇ ಕಾರಣ ಕೇಳುವ ಸೂಚನಾ ಪತ್ರ ಜಾರಿ ಮಾಡಿ ಸ್ವೀಕೃತಿಯನ್ನು ಪಡೆಯಲಾಗಿದೆ. ಸದರಿ ನೌಕರರು ಓದಲಾದ ಕ್ರಮಸಂಖ್ಯೆ (6) ರಲ್ಲಿ ಸ್ವೀಕೃತಿಯನ್ನು ಹಾಗೂ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಹೇಳಿಕೆಯಲ್ಲಿ ದಿನಾಂಕ:07.03.2003 ರಿಂದ 30.09.2006 ರವರೆವಿಗೆ ನನ್ನ ಅನಾರೋಗ್ಯದ ನಿಮಿತ್ತ ರಜೆಯನ್ನು ಉಪಯೋಗಿಸಿಕೊಂಡಿರುತ್ತೇನೆಯೇ ವಿನಃ ಯಾವುದೇ ದುರುದ್ದೇಶದಿಂದ ಕಛೇರಿ ಕರ್ತವ್ಯಕ್ಕೆ ಗೈರು ಹಾಜರಾಗಿರುವುದಿಲ್ಲ. ಆದರೆ ನನ್ನ ಗೈರು ಹಾಜರಿ ಬಗ್ಗೆ ಇಲಾಖಾ ವಿಚಾರಣಾ ಸಮಯದಲ್ಲಿ ಸಮರ್ಥಿಸಿಕೊಳ್ಳಲು ಅಸಮರ್ಥನಾಗಿರುತ್ತೇನೆ ವಿನಃ ಅವಿಧೇಯನಾಗಿರುವುದಿಲ್ಲ. ಆರೋಗ್ಯ ಸುಧಾರಿಸಿದ ನಂತರ ಕರ್ತವ್ಯಕ್ಕೆ ಹಾಜರಾಗಿರುವುದಾಗಿ ತಿಳಿಸಿ ದಂಡನೆಯನ್ನು ಕೈಬಿಡಬೇಕಾಗಿ ವಿನಂತಿಸಿರುತ್ತಾರೆ. ಸದರಿಯವರ ವಿರುದ್ಧ ಆರೋಪ ಸಾಬೀತಾಗಿರುವ ಹಾಗೂ ಅವರ ಮನವಿಯಲ್ಲಿ ಪರಿಗಣಿಸಬಹುದಾದ ಅಂಶ ಕಂಡು ಬರುವುದಿಲ್ಲವಾದ್ದರಿಂದ ಇವರನ್ನು ಆರೋಪಿ ಎಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–2/09/2003–04, ದಿನಾಂಕ:5ನೇ ಡಿಸೆಂಬರ್, 2009**

ಈ ಕೆಳಗೆ ಸಹಿ ಮಾಡಿರುವ ಡಾ: ಬಾಬುರಾವ್ ಮುಡಬಿ, ಭಾ.ಆ.ಸೇ., ಕೃಷಿ ಆಯುಕ್ತರು ಹಾಗೂ ಶಿಸ್ತು ಪ್ರಾಧಿಕಾರಿ, ಬೆಂಗಳೂರು ಆದ ನಾನು ಮೇಲೆ ವಿವರಿಸಿರುವ ಪ್ರಸ್ತಾವನೆಯಲ್ಲಿನ ಕಾರಣಗಳಿಂದ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಕೋಲಾರ ರವರು ಕೈಗೊಂಡ ವಿಚಾರಣಾ ವರದಿಯಲ್ಲಿ ಶ್ರೀ ಟಿ.ಆರ್. ರಾಜಗೋಪಾಲ್, ದ್ವಿತೀಯ ದರ್ಜೆ ಸಹಾಯಕ, ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಶ್ರೀನಿವಾಸಪುರ ಇವರು ದಿನಾಂಕ:07.03.2003 ರಿಂದ 30.09.2006 ರವರೆವಿಗೆ ಅನಧಿಕೃತ ಗೈರು ಹಾಜರಿ ಆರೋಪ ಸಾಬೀತಾಗಿರುವುದರಿಂದ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(vi) ರಡಿಯಲ್ಲಿ "ಕಡ್ಡಾಯ ನಿವೃತ್ತಿ"ಗೊಳಿಸಿ ಆದೇಶಿಸಿರುತ್ತೇನೆ.

ಸದರಿಯವರ ಅನಧಿಕೃತ ಗೈರು ಹಾಜರಿಯನ್ನು ಅನಧಿಕೃತ ಗೈರು ಹಾಜರಿ ಎಂದು ಪರಿಗಣಿಸಿ ಆದೇಶಿಸಿರುತ್ತೇನೆ. ಸದರಿಯವರ ಅಮಾನತ್ತಿನ ಅವಧಿಯನ್ನು "ಅಮಾನತ್ತಿನ ಅವಧಿ" ಎಂದು ಪರಿಗಣಿಸಿ ಆದೇಶಿಸಿರುತ್ತೇನೆ.

**ಡಾ: ಬಾಬುರಾವ್ ಮುಡಬಿ**

ಪಿ.ಆರ್.1307

ಕೃಷಿ ಆಯುಕ್ತರು ಹಾಗೂ ಶಿಸ್ತು ಪ್ರಾಧಿಕಾರಿಗಳು.

**ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ನಡವಳಿಗಳು**

**ಸಂಖ್ಯೆ: ಗಭೂಇ:ಗಗುಶಾ:92ಎಎಂಎಲ್ 97, ದಿನಾಂಕ:14ನೇ ಡಿಸೆಂಬರ್, 2009**

**ವಿಷಯ:** ಶ್ರೀ ಜೆ.ಡಿ. ಹೆಗ್ಗಪ್ಪನವರ್ ಇವರು ಗಣಿ ಗುತ್ತಿಗೆ ಸಂಖ್ಯೆ:1487ರ ನವೀಕರಣಕ್ಕಾಗಿ ಕೋರಿ ಸಲ್ಲಿಸಿರುವ ಅರ್ಜಿ ಸಂಖ್ಯೆ: 92 ಎಎಂಎಲ್ 97 ದಿನಾಂಕ:28.02.2007 ಅನ್ನು ಪರಿಗಣಿಸುವ ಬಗ್ಗೆ.

**ಉಲ್ಲೇಖ:** 1) ಚಿತ್ರದುರ್ಗ ಉಪ ನಿರ್ದೇಶಕರ ತಾಂತ್ರಿಕ ವರದಿ ಸಂಖ್ಯೆ: ಉನಿಚಿ: ಗಭೂಇ:ಗಗು/2008–09/1048 ದಿನಾಂಕ:05.06.2008.

2) ನಿರ್ದೇಶಕರ ಸುತ್ತೋಲೆ ಸಂಖ್ಯೆ: ಗಭೂಇ:ಉನಿ(ಖ.ಆ) ಮರಳು/06–07/4532 ದಿನಾಂಕ:19.11.2007.

3) ಈ ಕಛೇರಿ ನೋಟೀಸ್ ಸಂಖ್ಯೆ:ಗಭೂಇ:ಗಗುಶಾ:92 ಎಎಂಎಲ್97/08–09/8522 ದಿನಾಂಕ: 29.10.2009.

**ಪ್ರಸ್ತಾವನೆ:**

ಶ್ರೀ ಜೆ.ಡಿ. ಹೆಗ್ಗಪ್ಪನವರ್ ಇವರು ಹಾವೇರಿ ಜಿಲ್ಲೆ, ರಾಣಿಬೆನ್ನೂರು ಮತ್ತು ಹರಿಹರ ತಾಲ್ಲೂಕುಗಳ ಕೌಲಟ್ಟಿ ಮತ್ತು ಹಳಸಬಾಲು ಗ್ರಾಮಗಳ ತುಂಗಭದ್ರಾ ನದಿ ಪಾತ್ರದಲ್ಲಿ 130 ಎಕರೆ ಪ್ರದೇಶದಲ್ಲಿ ಎರಕದ ಮರಳು ಖನಿಜಕ್ಕಾಗಿ ಹೊಂದಿದ್ದ ಗಣಿ ಗುತ್ತಿಗೆ ಸಂಖ್ಯೆ:1487ರ ನವೀಕರಣಕ್ಕಾಗಿ ಕೋರಿ ನವೀಕರಣ ಅರ್ಜಿ ಸಂಖ್ಯೆ:92 ಎಎಂಎಲ್ 97 ದಿನಾಂಕ:28.02.1997ರಲ್ಲಿ ಸಲ್ಲಿಸಿರುತ್ತಾರೆ.

ನವೀಕರಣ ಅರ್ಜಿಯನ್ನು ಪರಿಗಣಿಸಿ, ಕಂದಾಯ ಇಲಾಖೆ ಮತ್ತು ಚಿತ್ರದುರ್ಗ ಉಪ ನಿರ್ದೇಶಕರಿಂದ ತಾಂತ್ರಿಕ ವರದಿಗಾಗಿ ಕೋರಲಾಗಿತ್ತು. ಜಿಲ್ಲಾಧಿಕಾರಿ ಹಾವೇರಿಯವರು ದಿನಾಂಕ:22.05.1998ರ ತಮ್ಮ ವರದಿಯಲ್ಲಿ ಹಳ್ಳದ ಬದುವಿಗೆ ಧಕ್ಕೆಯಾಗದಂತೆ 2 ಮೀಟರ್ ಬಿಟ್ಟು ಮರಳು ತೆಗೆಯುವಂತೆ ಷರತ್ತು ವಿಧಿಸಬೇಕು ಹಾಗೂ ಮೌಲ್ಡಿಂಗ್ ಸ್ಯಾಂಡ್ ಖನಿಜ ತೆಗೆಯಲು ಹತ್ತು ವರ್ಷಗಳ ವರೆಗೆ ನಿಗದಿ ಮಾಡಬಹುದಾಗಿದೆ ಎಂಬ ಷರತ್ತಿಗೊಳಪಟ್ಟು ನವೀಕರಿಸಲು ಶಿಫಾರಸ್ಸು ಮಾಡಿರುತ್ತಾರೆ. ಉಪ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಚಿತ್ರದುರ್ಗ ಜಿಲ್ಲೆಯವರು ದಿನಾಂಕ:05.06.2008ರ ತಮ್ಮ ತಾಂತ್ರಿಕ ವರದಿಯಲ್ಲಿ "The applied area for moulding sand (Renewal) lies between two bridges constructed across the Tungabhadra River, which are 1700 metres apart. As per recent Head office circular No. ಗಭೂಇ:ಉನಿ(ಖ.ಆ) ಮರಳು/06–07/4532 ದಿನಾಂಕ:19.11.2007, the lease area should be 1 Km. away from the bridge (both upstream and down stream side). With this condition, the applied area for renewal (moulding sand) falls within 1 Km. distance from the bridges". ಎಂದು ವರದಿ ಮಾಡಿರುತ್ತಾರೆ.

ರಾಜ್ಯದಲ್ಲಿ ಸೇತುವೆಗಳ ಸಮೀಪದಲ್ಲಿ ನಡೆಯುತ್ತಿರುವ ಮರಳು ಗಣಿಗಾರಿಕೆ ನಿರ್ಬಂಧಿಸುವ ಬಗ್ಗೆ ಈ ಕಛೇರಿ ಸುತ್ತೋಲೆ ಸಂಖ್ಯೆ: ಗಭೂಇ: ಉನಿ:ಖ.ಆ) ಮರಳು/06–07/ 4532 ದಿನಾಂಕ:19.11.2007ರಲ್ಲಿ ಸೇತುವೆಯ ಅಕ್ಕಪಕ್ಕ ಕನಿಷ್ಟ 1 ಕಿ.ಮೀ. ಉದ್ದದವರೆಗೂ ಮರಳು ಗಣಿಗಾರಿಕೆಗೆ ನಿರ್ಬಂಧಿಸಲು ಸೂಚಿಸಿದೆ.

ಈ ಹಿನ್ನೆಲೆಯಲ್ಲಿ ಅರ್ಜಿದಾರರಿಗೆ ಉಲ್ಲೇಖ (3)ರಂತೆ ಸೂಚನಾ ಪತ್ರವನ್ನು ಜಾರಿ ಮಾಡಲಾಗಿತ್ತು. ಇದಕ್ಕೆ ಅರ್ಜಿದಾರರು ದಿನಾಂಕ:18.11.2009ರಂದು ವಿವರಣೆ ಸಲ್ಲಿಸಿರುತ್ತಾರೆ. ಸದರಿ ವಿವರಣೆಯನ್ನು ಪರಿಶೀಲಿಸಿದೆ. ಆದರೆ, ಉಲ್ಲೇಖ (2)ರ ಈ ಕಛೇರಿ ಸುತ್ತೋಲೆಯಲ್ಲಿ ಸೂಚಿಸಿರುವ ಪ್ರಕಾರ ಸೇತುವೆಯ ಅಕ್ಕಪಕ್ಕ ಎರಡೂ ಬದಿಗಳಲ್ಲಿ 1 ಕಿ.ಮೀ. ಉದ್ದದ ವರೆಗೂ ಮರಳು ಗಣಿಗಾರಿಕೆಗೆ ಮಾಡುವಂತಿಲ್ಲ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ**

ಶ್ರೀ ಎಂ.ಇ. ಶಿವಲಿಂಗಮೂರ್ತಿ, ಭಾ.ಆ.ಸೇ. ನಿರ್ದೇಶಕರು ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಆದ ನಾನು ಸರ್ಕಾರದ ಆದೇಶ ಸಂಖ್ಯೆ: ಸಿಐ 03 ಎಂಎಂಎಂ 95 ದಿನಾಂಕ:27.05.1995ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಶ್ರೀ ಜೆ.ಡಿ. ಹೆಗ್ಗಪ್ಪನವರ್ ರವರು ಗಣಿಗುತ್ತಿಗೆ ನವೀಕರಣಕ್ಕಾಗಿ ಸಲ್ಲಿಸಿರುವ ಅರ್ಜಿ ಸಂಖ್ಯೆ 92 ಎಎಂಎಲ್ 97 ದಿನಾಂಕ:28.02.1997ಅನ್ನು ಪ್ರಸ್ತಾವನೆಯಲ್ಲಿ ತಿಳಿಸಿರುವ ಹಿನ್ನೆಲೆಯಲ್ಲಿ ಎಂಸಿಆರ್ 1960ರ ನಿಯಮ 26(1)ರಂತೆ ತಿರಸ್ಕರಿಸಿರುತ್ತೇನೆ.

ನಿರ್ದೇಶಕರು,

ಪಿ.ಆರ್.1322

ಗಣಿ ಮತ್ತು ಭೂವಿಜ್ಞಾನ ಇಲಾಖೆ.

## ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ), ಬೆಂಗಳೂರು, ಇವರ ನಡವಳಿಗಳು

**ವಿಷಯ:** ವಾಣಿಜ್ಯ ತೆರಿಗೆ ಇಲಾಖೆಯ ಜಂಟಿ ಆಯುಕ್ತರು, ಮೌಲ್ಯವರ್ಧಿತ ತೆರಿಗೆ ವಿಭಾಗ–1, ಬೆಂಗಳೂರು, ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳ ಪುನರ್ ವಿಂಗಡಣೆ, ಸ್ಥಳಾಂತರ ಮತ್ತು ಪುನರ್ ವ್ಯವಸ್ಥೆಗೊಳಿಸುವ ಬಗ್ಗೆ.

**ಉಲ್ಲೇಖ:**1) ಸರ್ಕಾರದ ಆದೇಶ ಸಂಖ್ಯೆ: ಆಇ 121 ವಾತೆಸಿ 94, ದಿನಾಂಕ:04.02.1995.

2) ಸರ್ಕಾರದ ಆದೇಶ ಸಂಖ್ಯೆ: ಆಇ 36 ವಾತೆಇ 2005, ದಿನಾಂಕ:31.03.2005.

3) ಆಯುಕ್ತರ ಆದೇಶ ಸಂಖ್ಯೆ: ಸಿಬ್ಬಂದಿ.3ಸಿ.ಸಿಆರ್.157/06–07, ದಿನಾಂಕ:24.03.2007.

4) ಆಯುಕ್ತರ ಆದೇಶ ಸಂಖ್ಯೆ: ಸಿಬ್ಬಂದಿ.3ಸಿ.ಸಿಆರ್.157/06–07, ದಿನಾಂಕ:30.03.2007.

5) ಆಯುಕ್ತರ ಅಧಿಸೂಚನೆ ಸಂಖ್ಯೆ:ವ್ಯಾಟ್.ಸಿಆರ್–1/2007–08, ದಿನಾಂಕ:22.09.2007.

6) ಆಯುಕ್ತರ ಆದೇಶ ಸಂಖ್ಯೆ: ಅಡ್‌ಕಾಮ್.ಹೆಚ್‌ಕ್ಯೂ–1/ಸಿಆರ್.1/07–08, ದಿನಾಂಕ:03.11.2007.

**ಪ್ರಸ್ತಾವನೆ:**

1. ವಾಣಿಜ್ಯ ತೆರಿಗೆ ಇಲಾಖೆಯು ಉಲ್ಲೇಖ (1)ರ ಆದೇಶ ಮುಖೇನ ಮೌಲ್ಯವರ್ಧಿತ ತೆರಿಗೆಯನ್ನು ಜಾರಿಗೆ ತಂದಿದ್ದು, ಬೆಂಗಳೂರು ನಗರದಲ್ಲಿ 16 ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನು ನಿಯೋಜಿಸಲಾಗಿತ್ತು. ಉಲ್ಲೇಖ (2), (3), (4) ಮತ್ತು (5)ರ ಆದೇಶ ಮುಖೇನ ಬೆಂಗಳೂರು ನಗರದಾದ್ಯಂತ ಭೌಗೋಳಿಕ ವ್ಯಾಪ್ತಿಯಲ್ಲಿ ಅಂಚೆಪಿನ್‌ಕೋಡ್ ಆಧಾರದ ಮೇಲೆ ಹೊಸದಾಗಿ 5 ಕಛೇರಿಗಳು ಸೇರಿದಂತೆ ಒಟ್ಟು 21 ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನು ನಿಯೋಜಿಸಿ, ವ್ಯಾಪಾರಸ್ಥರು ಮೌಲ್ಯವರ್ಧಿತ ತೆರಿಗೆ ಕಾಯ್ದೆ ಅಡಿ ಪಾವತಿಸುವ ತೆರಿಗೆಯನ್ನು ಸಂಗ್ರಹಿಸಲು ಆದೇಶಿಸಲಾಗಿತ್ತು. ಈ ವ್ಯಾಪ್ತಿಯಲ್ಲಿ ಪ್ರತಿ ಮೌಲ್ಯವರ್ಧಿತ ತೆರಿಗೆ ಕಛೇರಿಗಳಲ್ಲಿ ಸರಾಸರಿ 8,000 ದಿಂದ 10,000 ನೊಂದಾಯಿತ ವರ್ತಕರು ಇದ್ದು, ಎಲ್ಲಾ ವರ್ತಕರು ಸಮರ್ಪಕವಾಗಿ ನಮೂನೆ ನೀಡುತ್ತಿರುವರೇ, ತೆರಿಗೆ ಪಾವತಿಸುತ್ತಿರುವರೇ ಹಾಗೂ ನೀಡಿದ ಚೆಕ್ಕುಗಳು ಹಣ ಪಾವತಿಯಾಗದೆ ಹಿಂತಿರುಗಿಸಿದ ಪ್ರಕರಣಗಳಲ್ಲಿ ಸೂಕ್ತ ಕ್ರಮಗಳನ್ನು ಕೈಗೊಳ್ಳಲಾಗಿದೆಯೇ ಎಂಬುದರ ಬಗ್ಗೆ ನಿಗಾವಹಿಸಬೇಕಾಗುತ್ತದೆ. ಆದರೆ ಈ ಕಾರ್ಯವು ಸಮರ್ಪಕವಾಗಿ ನಿರ್ವಹಿಸಲು ಸಾಧ್ಯವಾಗುತ್ತಿಲ್ಲ ಹಾಗೂ ಹಾಲಿ ಇರುವ ಅಧಿಕಾರಿ ಮತ್ತು ನೌಕರರಿಂದ ಕಾರ್ಯನಿರ್ವಹಿಸಲು ಕಷ್ಟವಾದ್ದರಿಂದ ರಾಜ್ಯದ ರಾಜಸ್ವ ಸಂಗ್ರಹಣೆಯ ಮೂಲ ಉದ್ದೇಶದಿಂದ ಹಾಗೂ ಕಾಯ್ದೆಯನ್ನು ಸಮರ್ಪಕವಾಗಿ ಜಾರಿಗೊಳಿಸುವ ಉದ್ದೇಶದಿಂದ ಪ್ರಸ್ತುತ ಇರುವ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳಲ್ಲಿ ಬಹಳಷ್ಟು ಕರದಾತರು ಇರುವ ಕಛೇರಿಗಳನ್ನು ಮರುವಿಂಗಡಿಸುವುದು ಅನಿವಾರ್ಯವಾಗಿದೆ.

2. ಈ ಹಿನ್ನೆಲೆಯಲ್ಲಿ ರಾಜ್ಯದ ರಾಜಸ್ವ ಸಂಗ್ರಹಣೆಯ ಬೆಳವಣಿಗೆಯಲ್ಲಿ ತೀವ್ರವಾದ ಏರಿಕೆಯನ್ನು ತರಬಹುದೆಂಬ ಉದ್ದೇಶದಿಂದ ಹಾಗೂ ಪ್ರತಿ ಮೌಲ್ಯವರ್ಧಿತ ತೆರಿಗೆ ಕಛೇರಿಯಲ್ಲಿ ಕಡಿಮೆ ನೊಂದಾಯಿತ ವರ್ತಕರಿದ್ದಲ್ಲಿ ಅವರು ಸಲ್ಲಿಸುವ ದಾಖಲೆಗಳನ್ನು ಪರಿಶೀಲಿಸಿ, ಕಂಡುಬಂದ ನ್ಯೂನತೆಗಳನ್ನು ಆಧರಿಸಿ ತಕ್ಷಣ ಕ್ರಮ ಕೈಗೊಳ್ಳಬಹುದಾಗಿದೆ. ಇದರಿಂದಾಗಿ ತೆರಿಗೆ ಸಂಗ್ರಹಣೆಯಲ್ಲಿ ಉಪಯುಕ್ತತೆಯಾಗುತ್ತದೆ ಮತ್ತು ವರ್ತಕರು ನೀಡುವ ನಮೂನೆಗಳನ್ನು, ಪಾವತಿಸುವ ತೆರಿಗೆ, ಹೂಡುವಳಿ ತೆರಿಗೆಯ ಪೂರ್ಣ ವಿವರಗಳನ್ನು ಪರಿಶೀಲಿಸಬಹುದಾದ್ದರಿಂದ ತೆರಿಗೆ ವಂಚನೆಯನ್ನು ತಡೆಹಿಡಿಯಬಹುದಾಗಿದೆ. ಇದು ರಾಜ್ಯದ ರಾಜಸ್ವ ಸಂಗ್ರಹಣೆಯನ್ನು ಹೆಚ್ಚಿಸುವಲ್ಲಿ ಬಹಳ ಉಪಯುಕ್ತತೆಯಾಗುತ್ತದೆ. ಆದ್ದರಿಂದ ಬೆಂಗಳೂರು ನಗರದ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ–1, ಬೆಂಗಳೂರು, ಇವರ ವ್ಯಾಪ್ತಿಯಲ್ಲಿ ಹಾಲಿ ಇದ್ದ 4 ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳಲ್ಲಿ 2 ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನು ಭೌಗೋಳಿಕ ವ್ಯಾಪ್ತಿಯಲ್ಲಿ ಅಂಚೆ ಪಿನ್‌ಕೋಡ್ ಆಧಾರದ ಮೇಲೆ ಪುನರ್ ವಿಂಗಡಣೆಗೊಳಿಸಲು ಉದ್ದೇಶಿಸಿದೆ.

| ಕ್ರ. ಸಂ. | ಪ್ರಸ್ತುತ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳು | ಮರುವಿಂಗಡಿಸಿದ ಮೌಲ್ಯವರ್ಧಿತ ತೆರಿಗೆ ಕಛೇರಿಗಳು |
|---|---|---|
| 1. | ಎಲ್.ವಿ.ಓ–010, ವಿ.ಟಿ.ಕೆ–1, ಗಾಂಧಿನಗರ, ಬೆಂಗಳೂರು. | 1) ಎಲ್.ವಿ.ಓ.–010, ವಿಟಿಕೆ–1, ಗಾಂಧಿನಗರ, ಬೆಂಗಳೂರು.<br>2) ಎಲ್.ವಿ.ಓ–010 (ಅಪರ), ವಿಟಿಕೆ–1, ಗಾಂಧಿನಗರ, ಬೆಂಗಳೂರು. |
| 2. | ಎಲ್.ವಿ.ಓ.–030, ವಿ.ಟಿ.ಕೆ.–1, ಗಾಂಧಿನಗರ, ಬೆಂಗಳೂರು. | 3) ಎಲ್.ವಿ.ಓ.–030, ವಿಟಿಕೆ–1, ಗಾಂಧಿನಗರ, ಬೆಂಗಳೂರು.<br>4) ಎಲ್.ವಿ.ಓ–030 (ಅಪರ), ವಿಟಿಕೆ–1, ಗಾಂಧಿನಗರ, ಬೆಂಗಳೂರು. |

3. ಈ ರೀತಿಯಾಗಿ ಮರುವಿಂಗಡಣೆಗೊಳಿಸಿದ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳಿಗೆ ಕೆಳಕಂಡಂತೆ ಭೌಗೋಳಿಕ ಆಧಾರವನ್ನಾಗಿ ಅಂಚೆ ಪಿನ್‌ಕೋಡ್ ಸಂಖ್ಯೆಗಳನ್ನು ನೀಡಲು ನಿರ್ಧರಿಸಲಾಗಿದೆ. ಇವುಗಳ ವಿವರಗಳು ಕೆಳಕಂಡಂತಿವೆ.

| ಕ್ರ. ಸಂ. | ಕಛೇರಿಗಳು | ಅಂಚೆ ಪಿನ್‌ಕೋಡ್ ಸಂಖ್ಯೆ | ವರ್ತಕರ ಸಂಖ್ಯೆ | | ಕಛೇರಿಯ ಕಾರ್ಯವ್ಯಾಪ್ತಿ |
|---|---|---|---|---|---|
| | | | ಪಿನ್‌ಕೋಡ್ ವಾರು | ಒಟ್ಟು | |
| 1. | ಎಲ್.ವಿ.ಓ.–010 | 560053 | 5171 | 5171 | Boundaries of the area jurisdiction are as follows: Commencing from the intersection of Avenue Road with K.G. Road and proceeding towards west upto Balepet Main Road and proceeding south along Balepet Main Road upto Chickpet Main Road (OTC ROAD) and proceeding east along OTC Road upto intersection of Avenue Road and proceeding north along Avenue Road upto intersection with K.G. Road (Starting point).<br>Area falling within the above boundary with postal pin code 560053. |
| 2. | ಎಲ್.ವಿ.ಓ.–010 (ಅಪರ) | 560053 | 4773 | 4773 | Area covered by postal pin code 560053 excluding area jurisdiction of LVO-010. |
| 3. | ಎಲ್.ವಿ.ಓ.–030 | 560002 | 3900 | 3900 | Boundaries of the area jurisdiction are as follows: Commencing from intersection of Avenue Road with K.M. Naganna Road and proceeding east along K.M. Naganna Road upto its intersection with Siddanna Lane and proceeding south along Siddanna Lane upto intersection with Dharmaraya Temple Street/ Nagarthpet Main Road and proceeding east along Nagarthpet Main Road upto intersection with Sunkalpet and proceeding south upto intersection with Kumbarpet Main Road and continuing south along S.P. Road and proceeding west along S.P.Road upto intersection with Avenue Road and proceeding north along Avenue Road upto intersection with K.M. Naganna Road (starting point).<br>Area falling within the above boundary with postal pin code 560002. |
| 4. | ಎಲ್.ವಿ.ಓ.–030 (ಅಪರ) | 560002<br>560009 | 2650<br>1300 | 3950 | Area covered by postal pin code 560002 excluding area jurisdiction of LVO-030 and area covered by postal pin code 560009. |

4. ಪುನರ್ ವ್ಯವಸ್ಥೆಗೊಳಿಸಿದ ಕಛೇರಿಗಳ ಕಾರ್ಯನಿರ್ವಹಣೆಗೆ ಅಗತ್ಯವಾದ ಅಧಿಕಾರಿ ಹಾಗೂ ಸಿಬ್ಬಂದಿಗಳ ಹುದ್ದೆಯನ್ನು ಸ್ಥಳಾಂತರಿಸಲು ಉದ್ದೇಶಿಸಲಾಗಿದ್ದು, ಪ್ರತಿ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳಿಗೆ ಕೆಳಕಂಡಂತೆ ಹುದ್ದೆಗಳನ್ನು ಮಂಜೂರು ಮಾಡಲು ಉದ್ದೇಶಿಸಲಾಗಿದೆ.

| ಕ್ರ. ಸಂ. | ಕಛೇರಿಗಳು | ವಾ.ತೆ. ಸ.ಆ. | ವಾ.ತೆ.ಅ. | ವಾ.ತೆ.ಪ. | ಪ್ರ.ದ.ಸ. | ದ್ವಿ.ದ.ಸ. | ಬೆ.ಗಾರರು | ಸಂ. ನ. | ಕ.ವ. | 'ಡಿ' ಗ್ರೂಪ್ |
|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 |
| 1. | ಎಲ್.ವಿ.ಓ–010 | 1 | 1 | 1 | 2 | 9 | 1 | | 1 | 2 |
| 2. | ಎಲ್.ವಿ.ಓ.–010 (ಅಪರ) | 1 | 1 | 1 | 2 | 7 | 1 | 1 | 1 | 2 |
| 3. | ಎಲ್.ವಿ.ಓ.–030 | 1 | 1 | 1 | 2 | 7 | 1 | | 1 | 2 |
| 4. | ಎಲ್.ವಿ.ಓ.–030 (ಅಪರ) | 1 | 1 | 1 | 2 | 7 | 1 | 1 | 1 | 2 |

5. ಹಿಂದಿನ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳಾದ 10 ಮತ್ತು 30 ರಲ್ಲಿದ್ದ ಶೀಘ್ರಲಿಪಿಗಾರರ ಹುದ್ದೆ ಹಾಗೂ ಹೆಚ್ಚುವರಿ ವಾಣಿಜ್ಯ ತೆರಿಗೆ ನಿರೀಕ್ಷಕರನ್ನು ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ–1, ಬೆಂಗಳೂರು, ಇವರ ಕಛೇರಿಗೆ ಸ್ಥಳಾಂತರಿಸಲು ಉದ್ದೇಶಿಸಲಾಗಿದೆ. ಈ ಸಿಬ್ಬಂದಿಗಳ ವೇತನ ಬಟವಾಡೆ ಅಧಿಕಾರವನ್ನು ವಿಭಾಗದ ಜಂಟಿ ಆಯುಕ್ತರಿಗೆ ನೀಡಲು ನಿರ್ಧರಿಸಿದೆ. ಮೇಲ್ಕಂಡ ತಃಖ್ತೆಯ ಅಂಕಣ (3) ರಿಂದ (11) ರವರೆಗೆ ನಾಲ್ಕು ಕಛೇರಿಗಳಿಗೆ ಮಂಜೂರು ಮಾಡಿದ ಹುದ್ದೆಗಳಿಗೆ ಪೂರಕ ಸಿಬ್ಬಂದಿಯೊಂದಿಗೆ ಹುದ್ದೆಗಳನ್ನು ಸ್ಥಳಾಂತರಿಸುವ ಆದೇಶವನ್ನು ಪ್ರತ್ಯೇಕವಾಗಿ ನೀಡಲಾಗುತ್ತದೆ.

6. ಪುನರ್ ವ್ಯವಸ್ಥೆಗೊಳಿಸಲು ಉದ್ದೇಶಿಸಿದ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳ ಅಧಿಕಾರಿಗಳಿಗೆ ಮೌಲ್ಯವರ್ಧಿತ ತೆರಿಗೆ ಕೇಂದ್ರ ಮಾರಾಟ ತೆರಿಗೆ ಮತ್ತು ಪ್ರವೇಶ ತೆರಿಗೆ ಕಾಯ್ದೆ ಅಡಿ ಬರುವ ಎಲ್ಲಾ ತರಹದ ಕಾರ್ಯವನ್ನು ನಿರ್ವಹಿಸುವ ಅಧಿಕಾರ ವ್ಯಾಪ್ತಿಯನ್ನು ಹೊಂದಿರುತ್ತಾರೆ. ಆದರೆ ಆಡಳಿತಾತ್ಮಕವಾಗಿ ಪುನರ್‌ವ್ಯವಸ್ಥೆಗೊಳಿಸಲಾದ 2 ಕಛೇರಿಗಳ ವೇತನ ಬಟವಾಡೆ ಅಧಿಕಾರವನ್ನು ಮೂಲ ಕಛೇರಿಯಾದ ಎಲ್.ವಿ.ಓ.–010 ಮತ್ತು 030ರ ಅಧಿಕಾರಿಗಳಾಗಿ ಮುಂದುವರೆಯುತ್ತಾರೆ. ಈ ಅಧಿಕಾರಿ ವೇತನ ಬಟವಾಡೆ ಮತ್ತಿತರ ಭತ್ಯೆಗಳನ್ನು ಖಜಾನೆಯಿಂದ ಪಡೆದು ಹಂಚುವ ಅಧಿಕಾರವನ್ನು ಹೊಂದಿರುತ್ತಾರೆ.

7. ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಪುನರ್ ವಿಂಗಡಣೆ, ಪುನರ್ ವ್ಯವಸ್ಥೆ, ಸ್ಥಳಾಂತರ ಮಾಡುವ ಅಧಿಕಾರವನ್ನು ಸರ್ಕಾರ ಆಯುಕ್ತರಿಗೆ ಪ್ರತ್ಯಾಯೋಜಿಸಿರುವುದರಿಂದ, ಅದನ್ನು ಚಲಾಯಿಸಿ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ–1ರ ಆಡಳಿತ ವ್ಯಾಪ್ತಿಯಲ್ಲಿ ಬರುವ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿ–010 ಮತ್ತು 030 ನ್ನು ವಿಭಜಿಸಿ ಒಟ್ಟು 4 ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನಾಗಿ ಪುನರ್ ವ್ಯವಸ್ಥೆಗೊಳಿಸಲು ಉದ್ದೇಶಿಸಲಾಗಿದೆ.

ಅದಕ್ಕಾಗಿ ಈ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ–3ಡಿ/ಸಿಆರ್–02/08–09, ದಿನಾಂಕ:24ನೇ ನವೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗನುಗುಣವಾಗಿ ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಆಯುಕ್ತರಿಗೆ ನೀಡಿದ ಅಧಿಕಾರವನ್ನು ಉಪಯೋಗಿಸಿಕೊಂಡು, ನೊಂದಾಯಿತ ವರ್ತಕರು ಪಾವತಿಸುವ ತೆರಿಗೆ, ಹೂಡುವಳಿ ತೆರಿಗೆ ಮತ್ತು ಸಲ್ಲಿಸುವ ಮಾಸಿಕ ನಮೂನೆಗಳನ್ನು ಸಮಗ್ರವಾಗಿ ಪರಿಶೀಲಿಸಿ, ತೆರಿಗೆ ವಂಚನೆಯನ್ನು ತಡೆಗಟ್ಟಿ ರಾಜ್ಯದ ರಾಜಸ್ವ ಸಂಗ್ರಹಣೆಯನ್ನು ಹೆಚ್ಚಿಸುವ ಹಿತದೃಷ್ಟಿಯಿಂದ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ–1, ಬೆಂಗಳೂರು, ಇವರ ಆಡಳಿತ ವ್ಯಾಪ್ತಿಯಲ್ಲಿರುವ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳಲ್ಲಿ 2 ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳಾದ ಎಲ್.ವಿ.ಓ.–010 ಮತ್ತು ಎಲ್.ವಿ.ಓ–030 ಅನ್ನು ಮರುವಿಂಗಡಣೆ ಮಾಡಿ ಕೆಳಕಂಡ ತಃಖ್ತೆಯ ಅಂಕಣ 3ರಲ್ಲಿ ನಮೂದಿಸಿದಂತೆ 4 ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನಾಗಿ ಪುನರ್ ವ್ಯವಸ್ಥೆಗೊಳಿಸಿ ಆದೇಶಿಸಿದೆ.

| ಕ್ರ. ಸಂ. | ಪ್ರಸ್ತುತ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳು | ಮರುವಿಂಗಡಿಸಿದ ಮೌಲ್ಯವರ್ಧಿತ ತೆರಿಗೆ ಕಛೇರಿಗಳು |
|---|---|---|
| 1. | ಎಲ್.ವಿ.ಓ–010, ವಿ.ಟಿ.ಕೆ–1, ಗಾಂಧಿನಗರ, ಬೆಂಗಳೂರು. | 1) ಎಲ್.ವಿ.ಓ–010, ವಿ.ಟಿ.ಕೆ–1, ಗಾಂಧಿನಗರ, ಬೆಂಗಳೂರು.<br>2) ಎಲ್.ವಿ.ಓ–010 (ಅಪರ), ವಿ.ಟಿ.ಕೆ–1, ಗಾಂಧಿನಗರ, ಬೆಂಗಳೂರು |
| 2. | ಎಲ್.ವಿ.ಓ–030, ವಿ.ಟಿ.ಕೆ–1, ಗಾಂಧಿನಗರ, ಬೆಂಗಳೂರು. | 3) ಎಲ್.ವಿ.ಓ–030, ವಿ.ಟಿ.ಕೆ–1, ಗಾಂಧಿನಗರ, ಬೆಂಗಳೂರು.<br>4) ಎಲ್.ವಿ.ಓ–030 (ಅಪರ), ವಿ.ಟಿ.ಕೆ–1, ಗಾಂಧಿನಗರ, ಬೆಂಗಳೂರು. |

ಮೇಲ್ಕಂಡಂತೆ ಪುನರ್ ವಿಂಗಡಣೆಗೊಳಿಸಲಾದ ಎಲ್ಲಾ ನಾಲ್ಕು ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳ ಕಾರ್ಯನಿರ್ವಹಣೆಗೆ ಅಂಚೆ ಪಿನ್‌ಕೋಡ್‌ಗಳನ್ನು ಆಧರಿಸಿ, ಭೌಗೋಳಿಕ ವ್ಯಾಪ್ತಿಯನ್ನು ನಿಗದಿಪಡಿಸಿದೆ.

| ಕ್ರ. ಸಂ. | ಕಛೇರಿಗಳು | ಅಂಚೆ ಪಿನ್‌ಕೋಡ್ ಸಂಖ್ಯೆ | ವರ್ತಕರ ಸಂಖ್ಯೆ | | ಕಛೇರಿಯ ಕಾರ್ಯವ್ಯಾಪ್ತಿ |
|---|---|---|---|---|---|
| | | | ಪಿನ್‌ಕೋಡ್ ವಾರು | ಒಟ್ಟು | |
| 1. | ಎಲ್.ವಿ.ಓ.–010 | 560053 | 5171 | 5171 | Commencing from the interesection of BVK Iyengar Road with K.G.Road and proceeding towards west upto Balepet Main Road and proceeding along left side of Balepet Main Road towards south upto Chickpet Main Road (OTC ROAD) and proceeding along left side of OTC Road towards east upto intersection of Avenue Road and proceeding along left side of Avenue Road towards north upto intersection with K.G.Road and proceeding along K.G. Road towards west upto B.V.K. Iyengar Road intersection and including all intermediary cross roads within the above area bearing postal pin code 560053. |
| 2. | ಎಲ್.ವಿ.ಓ.–010 (ಅಪರ) | 560053 | 4773 | 4773 | Area covered by postal pin code 560053 excluding area jurisdiction of LVO-010. |
| 3. | ಎಲ್.ವಿ.ಓ.–030 | 560002 | 3900 | 3900 | Commencing from intersection of Avenue Road with K.M. Naganna Road and proceeding east along right side of K.M. Naganna Road upto its intersection with Siddanna Lane and proceeding south along right side of Siddanna Lane upto intersection with Dharmaraya Temple Street/ Nagarthpet Main Road and proceeding east along right side of Nagarthpet Main Road upto intersection with Sunkalpet and proceeding south on the right side upto intersection with Kumbarpet Main Road and continuing south along right side of S.P. Road and proceeding west along right side of S.P.Road upto intersection with Avenue Road and proceeding north along right side of Avenue road upto intersection with K.M. Naganna Road and including all intermediary cross roads within the above area bearing postal pin code 560002. |

| ಕ್ರ. ಸಂ. | ಕಛೇರಿಗಳು | ಅಂಚೆ ಪಿನ್‌ಕೋಡ್ ಸಂಖ್ಯೆ | ವರ್ತಕರ ಸಂಖ್ಯೆ | | ಕಛೇರಿಯ ಕಾರ್ಯವ್ಯಾಪ್ತಿ |
|---|---|---|---|---|---|
| | | | ಪಿನ್‌ಕೋಡ್ ವಾರು | ಒಟ್ಟು | |
| 4. | ಎಲ್.ವಿ.ಓ.–030 (ಅಪರ) | 560002<br>560009 | 2650<br>1300 | 3950 | Area covered by postal pin code 560002 excluding area jurisdiction of LVO-030 and area covered by postal pin code 560009. |

ಪುನರ್ ವ್ಯವಸ್ಥೆಗೊಳಿಸಿದ ಎಲ್ಲಾ ನಾಲ್ಕು ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳ ಕಾರ್ಯನಿರ್ವಹಣೆಗೆ ಅಗತ್ಯವಾದ ಅಧಿಕಾರಿ ಹಾಗೂ ಸಿಬ್ಬಂದಿಗಳ ಹುದ್ದೆಯನ್ನು ಕೆಳಕಂಡಂತೆ ಮಂಜೂರು ಮಾಡಿ ಆದೇಶಿಸಿದೆ.

| ಕ್ರ. ಸಂ. | ಕಛೇರಿಗಳು | ವಾ.ತೆ. ಸ.ಆ. | ವಾ.ತೆ.ಅ. | ವಾ.ತೆ.ಪ. | ಪ್ರ.ದ.ಸ. | ದ್ವಿ.ದ.ಸ. | ಬೆ.ಗಾರರು | ಸಂ. ನ. | ಕ.ವ. | 'ಡಿ' ಗ್ರೂಪ್ |
|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 |
| 1. | ಎಲ್.ವಿ.ಓ–010 | 1 | 1 | 1 | 2 | 9 | 1 | | 1 | 2 |
| 2. | ಎಲ್.ವಿ.ಓ.–010 (ಅಪರ) | 1 | 1 | 1 | 2 | 7 | 1 | 1 | 1 | 2 |
| 3. | ಎಲ್.ವಿ.ಓ.–030 | 1 | 1 | 1 | 2 | 7 | 1 | | 1 | 2 |
| 4. | ಎಲ್.ವಿ.ಓ.–030 (ಅಪರ) | 1 | 1 | 1 | 2 | 7 | 1 | 1 | 1 | 2 |

ಹಿಂದಿನ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳಾದ 10 ಮತ್ತು 30 ರಲ್ಲಿ ಹೆಚ್ಚುವರಿಯಾಗಿದ್ದ ಎರಡು ಶೀಘ್ರಲಿಪಿಗಾರರ ಹಾಗೂ ಎರಡು ವಾಣಿಜ್ಯ ತೆರಿಗೆ ಪರಿವೀಕ್ಷಕರ ಹುದ್ದೆಯನ್ನು ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ–1, ಬೆಂಗಳೂರು, ಇವರ ಕಛೇರಿಗೆ ಸ್ಥಳಾಂತರಿಸಲಾಗಿದೆ. ಈ ಸಿಬ್ಬಂದಿಗಳ ವೇತನ ಬಟವಾಡೆ ಅಧಿಕಾರವನ್ನು ವಿಭಾಗದ ಜಂಟಿ ಆಯುಕ್ತರಿಗೆ ನೀಡಲಾಗಿದೆ. ಮೇಲ್ಕಂಡ ತಃಖ್ತೆಯ ಅಂಕಣ (3) ರಿಂದ (11) ರವರೆಗೆ ನಾಲ್ಕು ಕಛೇರಿಗಳಿಗೆ ಮಂಜೂರು ಮಾಡಿದ ಸಿಬ್ಬಂದಿಗಳು ಹಾಗೂ ಪೂರಕ ಹುದ್ದೆಯ ಸ್ಥಳಾಂತರವನ್ನು ಪ್ರತ್ಯೇಕ ಆದೇಶದಲ್ಲಿ ಹೊರಡಿಸಲಾಗುತ್ತದೆ.

ಪುನರ್ ವ್ಯವಸ್ಥೆಗೊಳಿಸಿದ ಎಲ್ಲಾ ಮೌಲ್ಯವರ್ಧಿತ ತೆರಿಗೆ ಕಛೇರಿಗಳ ಅಧಿಕಾರಿಗಳಿಗೆ ಕರ್ನಾಟಕ ಮೌಲ್ಯವರ್ಧಿತ ತೆರಿಗೆ, ಕೇಂದ್ರ ಮಾರಾಟ ತೆರಿಗೆ ಮತ್ತು ಪ್ರವೇಶ ತೆರಿಗೆ ಕಾಯ್ದೆ ಅಡಿ ಎಲ್ಲಾ ಅಧಿಕಾರ ವ್ಯಾಪ್ತಿಯನ್ನು ಹೊಂದಿರುತ್ತಾರೆ. ಆದರೆ ಆಡಳಿತಾತ್ಮಕವಾಗಿ ಪುನರ್ ವ್ಯವಸ್ಥೆಗೊಳಿಸಲಾದ 2 ಕಛೇರಿಗಳ ವೇತನ ಬಟವಾಡೆ ಅಧಿಕಾರವನ್ನು ಮೂಲ ಕಛೇರಿಯಾದ ಎಲ್.ವಿ.ಓ.–010 ಮತ್ತು ಎಲ್.ವಿ.ಓ–030 ರ ಅಧಿಕಾರಿಗಳಿಗೆ ನೀಡಲಾಗಿದೆ.

ಈ ವ್ಯವಸ್ಥೆ ದಿನಾಂಕ:01.12.2009 ರಿಂದ ಜಾರಿಗೆ ಬರುತ್ತದೆ.

ವಾಣಿಜ್ಯ ತೆರಿಗೆಗಳ ಆಯುಕ್ತರು
(ಕರ್ನಾಟಕ), ಬೆಂಗಳೂರು.

ಪಿ.ಆರ್.1324

## ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)
## ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಸಣ್ಣ ನೀರಾವರಿ ಉಪ–ವಿಭಾಗ, ಕುಷ್ಟಗಿ
## ಅಧಿಸೂಚನೆ

**ಸಂಖ್ಯೆ: ಸ.ಕಾ.ನಿ.ಸ/ ಸನೀಉವಿ/ಕು/ಸಿ–1/2009–10/673, ದಿನಾಂಕ:18ನೇ ಡಿಸೆಂಬರ್, 2009**

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯ್ದೆ 22)ರ ಅಡಿಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರ ಸಣ್ಣ ನೀರಾವರಿ ಉಪವಿಭಾಗ ಕುಷ್ಟಗಿ ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸದರಿ ಅಧಿನಿಯಮದ ಸೆಕ್ಷನ್ 5(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಅಧಿಕಾರಿಗಳನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ ಸೆಕ್ಷನ್ 5(2)ರಡಿಯಲ್ಲಿ "ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ" ಮತ್ತು ಸೆಕ್ಷನ್ 19(1)ರಡಿಯಲ್ಲಿ "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

| ಕ್ರ. ಸಂ. | ಕಛೇರಿ ಮತ್ತು ವಿಳಾಸ | "ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | "ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19(1) |
|---|---|---|---|---|
| 1. | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರ ಸಣ್ಣ ನೀರಾವರಿ ಉಪ–ವಿಭಾಗ ಕುಷ್ಟಗಿ. 08536–267084 | ರಮೇಶ ಜಡ್. ಸೋಲಾಪುರ, ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರ ಸಣ್ಣ ನೀರಾವರಿ ಉಪ–ವಿಭಾಗ, ಕುಷ್ಟಗಿ. 9448418443 | ಗುರುರಾಜ ಪ್ಯಾಟಿ, ಪ್ರ.ದ.ಸ. ಸಣ್ಣ ನೀರಾವರಿ ಉಪ–ವಿಭಾಗ, ಕುಷ್ಟಗಿ. 9008194257 | ಕಾರ್ಯನಿರ್ವಾಹಕ ಅಭಿಯಂತರರು ಸಣ್ಣ ನೀರಾವರಿ ವಿಭಾಗ, ಕುಷ್ಟಗಿ. |

ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರ,
ಸಣ್ಣ ನೀರಾವರಿ ಉಪ–ವಿಭಾಗ, ಕುಷ್ಟಗಿ.

ಪಿ.ಆರ್.1327

## ಕಮಾಂಡೆಂಟ್, 7ನೇ ಪಡೆ, ಕರಾಮೀಪೊ, ಅಸ್ಸೈಗೋಳಿ, ಮಂಗಳೂರು–574199.

## ಅಧಿಸೂಚನೆ

**ಸಂಖ್ಯೆ:43/ಸಿಬ್ಬಂದಿ–1/2009–10, ದಿನಾಂಕ:17ನೇ ಡಿಸೆಂಬರ್, 2009**

ಭಾರತ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯ್ದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಮಾಹಿತಿ ಹಕ್ಕು ಅಧಿನಿಯಮ 2005ರ (Central Act 22 of 2005) ಅಡಿಯಲ್ಲಿಯ ಕಾಲಂ 4(1)(ಬಿ) ಅಡಿಯಲ್ಲಿ ಕರ್ನಾಟಕ ರಾಜ್ಯ ಮೀಸಲು ಪೊಲೀಸ್, 7ನೇ ಪಡೆಗೆ ಸಂಬಂಧಿಸಿದ ಮಾಹಿತಿಗಳನ್ನು ಈ ಕೆಳಗಿನಂತೆ ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**I. ಸಂಸ್ಥೆಯ ಬಗ್ಗೆ ವಿವರಗಳು, ಕಾರ್ಯಗಳು ಮತ್ತು ಕರ್ತವ್ಯಗಳು:**

(ಅ) **ಸಂಸ್ಥೆಯ ಹೆಸರು:** 7ನೇ ಪಡೆ, ಕರ್ನಾಟಕ ರಾಜ್ಯ ಮೀಸಲು ಪೊಲೀಸ್', ಮಂಗಳೂರು.

(ಆ) **ರಚನೆ:** ಸರ್ಕಾರವು ಆದೇಶ ಸಂಖ್ಯೆ:ಹೆಚ್‌ಡಿ.278.ಪಿಒಪಿ.92 ದಿನಾಂಕ:08–01–1993ರಲ್ಲಿ ಮಂಗಳೂರು ಕೇಂದ್ರವನ್ನಾಗಿಸಿ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ 7ನೇ ಪಡೆಯನ್ನು ಈ ಕೆಳಕಂಡ ಅಧಿಕಾರಿ/ಸಿಬ್ಬಂದಿ ಬಲದೊಂದಿಗೆ ಸ್ಥಾಪಿಸಲು ಮಂಜೂರಾತಿ ನೀಡಿರುತ್ತದೆ. ಕೆಎಸ್‌ಆರ್‌ಪಿ 7ನೇ ಪಡೆಯು ದಿನಾಂಕ:01–03–1993 ರಂದು ವಿಧ್ಯುಕ್ತವಾಗಿ ಕಾರ್ಯಾರಂಭಿಸಲು ಪ್ರಾರಂಭಿಸಿದೆ.

| ಕ್ರ.ಸಂ. | ಹುದ್ದೆಯ ಹೆಸರು | ಮಂಜೂರಾತಿ ಬಲ |
|---|---|---|
| **(i) ಕಾರ್ಯ ನಿರ್ವಾಹಕ ಅಧಿಕಾರಿ/ಸಿಬ್ಬಂದಿ.** | | |
| 1 | ಕಮಾಂಡೆಂಟ್ | 01 |
| 2. | ಸಹಾಯಕ ಕಮಾಂಡೆಂಟ್ | 04 |
| 3. | ರಿಸರ್ವ್ ಪೊಲೀಸ್ ಇನ್ಸ್‌ಪೆಕ್ಟರ್ | 08 |
| 4. | ರಿಸರ್ವ್ ಪೊಲೀಸ್ ಸಬ್–ಇನ್ಸ್‌ಪೆಕ್ಟರ್ | 22 |
| 5. | ಸಹಾಯಕ ರಿಸರ್ವ್ ಪೊಲೀಸ್ ಸಬ್–ಇನ್ಸ್‌ಪೆಕ್ಟರ್ | 07 |
| 6, | ರಿಸರ್ವ್ ಹೆಡ್ ಕಾನ್ಸ್‌ಟೇಬಲ್ | 153 |
| 7. | ರಿಸರ್ವ್ ಪೊಲೀಸ್ ಕಾನ್ಸ್‌ಟೇಬಲ್ | 700 |
| 8. | ಅನುಯಾಯಿ | 90 |
| **ಒಟ್ಟು** | | **985** |
| **(ii) ಲಿಪಿಕ ಅಧಿಕಾರಿ/ಸಿಬ್ಬಂದಿ** | | |
| 1. | ಸಹಾಯಕ ಆಡಳಿತಾಧಿಕಾರಿ | 01 |
| 2. | ಶಾಖಾಧೀಕ್ಷಕರು | 01 |
| 3. | ಪ್ರಥಮ ದರ್ಜೆ ಸಹಾಯಕರು | 03 |
| 4. | ದ್ವಿತೀಯ ದರ್ಜೆ ಸಹಾಯಕರು | 04 |
| 5. | ಶೀಘ್ರಲಿಪಿಗಾರರು | 01 |
| 6. | ಬೆರಳಚ್ಚುಗಾರರು | 02 |
| 7. | ದಲಾಯತ್ | 01 |
| **ಒಟ್ಟು** | | **13** |

**II. ಕಾರ್ಯಗಳು ಮತ್ತು ಕರ್ತವ್ಯಗಳು:**

ಈ ಪಡೆಯ ಅಧಿಕಾರಿ/ಸಿಬ್ಬಂದಿಗಳನ್ನು ದಕ್ಷಿಣ ಕನ್ನಡ, ಉತ್ತರ ಕನ್ನಡ ಮತ್ತು ಕೊಡಗು ಜಿಲ್ಲೆಗಳ ನಾಗರಿಕ ಪೊಲೀಸರಿಗೆ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡಲು ನೆರವಾಗುವಂತೆ ಸ್ಥಾಪಿಸಲಾಗಿದ್ದರೂ, ರಾಜ್ಯದ ಇತರೆ ಜಿಲ್ಲೆಗಳ ಮತ್ತು ಹೊರ ರಾಜ್ಯಗಳ ಪೊಲೀಸ್ ನೆರವಿಗೂ ಸಹ ನಿಯೋಜಿಸಲಾಗುತ್ತಿರುವುದಲ್ಲದೆ ಇತರೇ ವಿಶೇಷ ಘಟಕಗಳಲ್ಲಿ ಮತ್ತು ನಕ್ಸಲ್ ನಿಗ್ರಹ ಘಟಕದಲ್ಲಿಯೂ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವರು.

ಈ ಪಡೆಯ ಕಾರ್ಯ ನಿರ್ವಾಹಕ ಅಧಿಕಾರಿ/ಸಿಬ್ಬಂದಿಗಳು ಮತ್ತು ಲಿಪಿಕ ಸಿಬ್ಬಂದಿಗಳು ಈ ಕೆಳಕಂಡಂತೆ ಕರ್ತವ್ಯಗಳನ್ನು ನಿರ್ವಹಿಸುತ್ತಿರುವರು.

**(1) ಕಮಾಂಡೆಂಟ್:**

ಶ್ರೀ ರಾಮದಾಸ ಗೌಡ, ಎಸ್. ಇವರು ದಿನಾಂಕ:15–09–2008ರಿಂದ ಕಮಾಂಡೆಂಟ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವರು. ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:108ರಿಂದ 152ರಲ್ಲಿ ನೀಡಿರುವ

ಸೂಚನೆಗಳಂತೆ ಪಡೆಯ ಮೇಲ್ವಿಚಾರಣೆ, ಆಡಳಿತ, ನಿಯೋಜನೆ, ತರಬೇತಿ, ಶಿಸ್ತು ಕ್ರಮಗಳು, ಹಣಕಾಸು ವ್ಯವಹಾರಗಳ ನಿರ್ವಹಣೆ, ಶಿಬಿರ ನಾಯಕರ ವಿಭಾಗ, ಮೋಟಾರು ವಾಹನ'ಗಳ ವಿಭಾಗಗಳ ಮೇಲ್ವಿಚಾರಣೆ ಮತ್ತು ಅಧಿಕಾರಿ/ಸಿಬ್ಬಂದಿಗಳ ಕಲ್ಯಾಣ ಕಾರ್ಯಕ್ರಮಗಳ ಉಸ್ತುವಾರಿಗೆ ಸಂಬಂಧಿಸಿದಂತೆ ಅತೀ ಜವಾಬ್ದಾರಿಯಿಂದ ಮತ್ತು ಹೊಣೆಗಾರಿಕೆಯಿಂದ ಕರ್ತವ್ಯ ನಿರ್ವಹಿಸುವುದು. ಮಾಹಿತಿ ಹಕ್ಕು ಅಧಿನಿಯಮ–2005 ಸೆಕ್ಷನ್ 19(1)ರಂತೆ ಮೇಲ್ಮನವಿ ಪ್ರಾಧಿಕಾರಿಯಾಗಿಯೂ ಕರ್ತವ್ಯ ನಿರ್ವಹಿಸುವರು.

**(2) ಸಹಾಯಕ ಕಮಾಂಡೆಂಟ್(ಅಡ್ಜುಡೆಂಟ್):**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:153ರಂತೆ ಪಡೆಯಲ್ಲಿನ ಸೇವೆಯಲ್ಲಿ ಹಿರಿಯರಾದ ಸಹಾಯಕ ಕಮಾಂಡೆಂಟ್‌ರವರನ್ನು ಈ ಹುದ್ದೆಗೆ ನೇಮಕ ಮಾಡಲಾಗುವುದು. ಪ್ರಸ್ತುತ ಶ್ರೀ ಬಿ.ಎಸ್.ಶಂಕರ, ಇವರು ದಿನಾಂಕ:12–06–2006ರಿಂದ ಸಹಾಯಕ ಕಮಾಂಡೆಂಟ್, (ಅಡ್ಜು) ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವರು. ಇವರು ಪಡೆಯ 2ನೇ ಅತೀ ಹಿರಿಯ ದರ್ಜೆಯ ಅಧಿಕಾರಿಯಾಗಿದ್ದು ಕಮಾಂಡೆಂಟ್‌ರವರ ಸ್ಟಾಫ್ ಆಫೀಸರ್(second-in-command) ಆಗಿ ಕರ್ತವ್ಯ ನಿರ್ವಹಿಸುವರು. ಸಾಮಾನ್ಯವಾಗಿ ಇವರು ಕೇಂದ್ರ ದಳದ ಉಸ್ತುವಾರಿಯನ್ನು ನೋಡಿಕೊಳ್ಳುವರು. ಆದೇಶ ಸಂಖ್ಯೆ:154ರಿಂದ 175ರಲ್ಲಿ ನೀಡಿರುವ ಸೂಚನೆಗಳಂತೆ ಪಡೆಯ ಆಡಳಿತ, ನಿಯೋಜನೆ, ತರಬೇತಿ, ಕಲ್ಯಾಣ ಕಾರ್ಯಕ್ರಮಗಳ ಕರ್ತವ್ಯವನ್ನೂ ನಿರ್ವಹಿಸುವರು.

**(3) ಸಹಾಯಕ ಕಮಾಂಡೆಂಟ್ಸ್:**

ಶ್ರೀ ಎಂ.ಮಲ್ಲಯ್ಯ, ದಿನಾಂಕ:22–11–2007ರಿಂದ, ಕೆ.ಲಿಂಗಯ್ಯ, ದಿನಾಂಕ:24–11–2007ರಿಂದ, ಮತ್ತು ಶ್ರೀ ಮಹಾದೇವಯ್ಯ, ದಿನಾಂಕ:24–11–2007ರಿಂದ ಸಹಾಯಕ ಕಮಾಂಡೆಂಟ್ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವರು. ಶ್ರೀ ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:176ರಂತೆ ಇವರುಗಳನ್ನು ವಿಭಾಗದ ಸಹಾಯಕ ಕಮಾಂಡೆಂಟ್‌ರವರನ್ನಾಗಿ ನೇಮಕ ಮಾಡಲಾಗುವುದು. ಪ್ರತಿಯೊಬ್ಬ ಸಹಾಯಕ ಕಮಾಂಡೆಂಟ್‌ರವರಿಗೆ 2–3 ಕಂಪೆನಿಗಳ ಜವಾಬ್ದಾರಿಯನ್ನು ವಹಿಸಿ ಕೊಡಲಾಗುವುದು. ಆದೇಶ ಸಂಖ್ಯೆ:177ರಿಂದ 196ರಲ್ಲಿ ನೀಡಿರುವ' ಸೂಚನೆಗಳಂತೆ ಅವರ ಅಧೀನಕ್ಕೆ ಒಳಪಡುವ ಕಂಪೆನಿಗಳ ಆಡಳಿತ ಮತ್ತು ನಿಯೋಜನೆ, ಶಿಸ್ತು ಕ್ರಮಗಳು, ತರಬೇತಿ ಮತ್ತು ಕಲ್ಯಾಣ ಕಾರ್ಯಕ್ರಮಗಳ ಕರ್ತವ್ಯವನ್ನು ನಿರ್ವಹಿಸುವರು.

**(4) ಬೆಟಾಲಿಯನ್ ಕ್ವಾರ್ಟರ್ ಮಾಸ್ಟರ್ ಗ್ರೂಫ್:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–3ರ ಆದೇಶ ಸಂಖ್ಯೆ:42ರಂತೆ ಈ ಹುದ್ದೆಗೆ ಓರ್ವ ಸ್ಪೆಷಲ್ ಆರ್.ಪಿ.ಐ. ದರ್ಜೆಯ ಅಧಿಕಾರಿಯನ್ನು ನೇಮಕ ಮಾಡಲಾಗುವುದು. ಪ್ರಸ್ತುತ ಈ ಹುದ್ದೆಯಲ್ಲಿ ಶ್ರೀ ಎಂ.ಮಲ್ಲಯ್ಯ, ಸಹಾಯಕ ಕಮಾಂಡೆಂಟ್ ರವರು ದಿನಾಂಕ: 28–04–2008ರಿಂದ ಹೆಚ್ಚಿನ ಪ್ರಭಾರದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವರು. ಆದೇಶ ಸಂಖ್ಯೆ:43ರಿಂದ 62ರಲ್ಲಿ ನೀಡಿರುವ ಸೂಚನೆಗಳಂತೆ ಸ್ಟೋರ್ಸ್, ಆರ್ಮ್ಸ್ ಮತ್ತು ಅಮ್ಯುನಿಶನ್, ರೇಂಜ್ ಪ್ರಾಕ್ಟೀಸ್, ಕಟ್ಟಡಗಳು, ಜಮೀನುಗಳು, ಪೀಠೋಪಕರಣಗಳು ಮತ್ತು ಆಟೋಟ ಸ್ಪರ್ಧೆಗಳ ಸಲಕರಣೆಗಳು, ಬ್ಯಾಂಡ್ ಸಲಕರಣೆಗಳು, ಬಾರ್ಬರ್ಸ್, ಧೋಬಿ, ಕಾರ್ಪೆಂಟರ್ ಮತ್ತು ಕೊಬ್ಲರ್ಸ್ ಸಲಕರಣೆಗಳು ಹಾಗೂ ಫೋಲೋವರ್ಸ್‌ಗಳ ಉಸ್ತುವಾರಿ ಕರ್ತವ್ಯಗಳನ್ನೂ ಇವರು ನಿರ್ವಹಿಸುವರು.

**(5) ಮೋಟಾರು ಟ್ರಾನ್ಸ್‌ಪೋರ್ಟ್ ಗ್ರೂಫ್:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–3ರ ಆದೇಶ ಸಂಖ್ಯೆ:63ರಂತೆ ಪಿ.ಡಿ.ಎಂ.ಎಸ್. ಮೋಟಾರು ವಾಹನ ವಿಭಾಗದಲ್ಲಿ ತರಬೇತಿ ಹೊಂದಿದ ಓರ್ವ ಸ್ಪೆಷಲ್ ಆರ್.ಪಿ.ಐ. ದರ್ಜೆಯ ಅಧಿಕಾರಿಯನ್ನು ಈ ಹುದ್ದೆಗೆ ನೇಮಕ ಮಾಡಲಾಗುವುದು. ಪ್ರಸ್ತುತ ಶ್ರೀ ಕೆ.ನಾಗರಾಜ, ಆರ್.ಪಿ.ಐ.ರವರು ಎಂಟಿಒ ಆಗಿ ಕರ್ತವ್ಯ ನಿರ್ವಹಿಸುತ್ತಿರುವರು. ಆದೇಶ ಸಂಖ್ಯೆ:64ರಿಂದ 84ರಲ್ಲಿ ನೀಡಿರುವ ಸೂಚನೆಗಳಂತೆ ವಾಹನಗಳ ನಿರ್ವಹಣೆ, ದಾಖಲಾತಿಗಳ ನಿರ್ವಹಣೆ, ವಾಹನಗಳ ಪರಿವೀಕ್ಷಣೆ, ದುರಸ್ತಿ, ಇನ್ಸುರೆನ್ಸ್ ಮತ್ತು ಟ್ಯಾಕ್ಸ್ ಪಾವತಿ, ಚಾಲಕರುಗಳಿಗೆ ತರಬೇತಿ, ಮೋಟಾರು ವಾಹನ ವಿಭಾಗ' ಸಿಬ್ಬಂದಿಗಳಲ್ಲಿ ಶಿಸ್ತು ನಿರ್ವಹಣೆ, ಲೆಕ್ಕಪತ್ರ, ಸಂಗ್ರಹಣೆ ವಿಭಾಗದ ನಿರ್ವಹಣೆ ಹಾಗೂ ವಾಹನಗಳ ಡ್ಯೂಟಿ ರೋಸ್ಟರ್ ಮತ್ತು ಕಂಡೆಮ್ನೇಶನ್ ಕರ್ತವ್ಯಗಳನ್ನು ನಿರ್ವಹಿಸುವರು.

**(6) ಮೋಟಾರು ವಾಹನ ವಿಭಾಗದ ಚಾಲಕರು:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–3ರ ಆದೇಶ ಸಂಖ್ಯೆ:63ರಂತೆ ಚಾಲನಾ ಲೈಸೆನ್ಸ್ ಹೊಂದಿದ ಸಿಬ್ಬಂದಿಗಳನ್ನು ಚಾಲಕರನ್ನಾಗಿ ನೇಮಕ ಮಾಡಲಾಗುವುದು. ಆದೇಶ ಸಂಖ್ಯೆ:76ರಿಂದ 84ರಲ್ಲಿ ನೀಡಿರುವ ಸೂಚನೆಗಳಂತೆ ಚಾಲಕರುಗಳು ಕರ್ತವ್ಯ ನಿರ್ವಹಿಸುವರು.

**(6) ಆರ್ಮರರ್ ಗ್ರೂಫ್:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–3ರ ಆದೇಶ ಸಂಖ್ಯೆ:85ರಂತೆ ಆರ್ಮರರ್ ಮೂಲ ತರಬೇತಿ ಹೊಂದಿದ ಸಿಬ್ಬಂದಿಯನ್ನು ಈ ಹುದ್ದೆಗೆ ನೇಮಕ ಮಾಡಲಾಗುವುದು. ಆದೇಶ ಸಂಖ್ಯೆ:86ರಿಂದ 91ರಲ್ಲಿ ನೀಡಿರುವ ಸೂಚನೆಗಳಂತೆ ಇವರು ಕರ್ತವ್ಯ ನಿರ್ವಹಿಸುವರು.

**(7) ಬ್ಯಾಂಡ್ ಗ್ರೂಫ್:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–3ರ ಆದೇಶ ಸಂಖ್ಯೆ:92ರಲ್ಲಿ ಸೂಚಿಸಿರುವಂತೆ ಸಿಬ್ಬಂದಿಗಳನ್ನು ನೇಮಕ ಮಾಡಲಾಗುತ್ತಿದ್ದು, ಆದೇಶ ಸಂಖ್ಯೆ:93ರಿಂದ 97ರಲ್ಲಿ ನೀಡಿರುವ ಸೂಚನೆಗಳಂತೆ ಇವರುಗಳು ಕರ್ತವ್ಯ ನಿರ್ವಹಿಸುವರು.

**(8) ಸಿಗ್ನಲ್ ಗ್ರೂಫ್:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–3ರ ಆದೇಶ ಸಂಖ್ಯೆ:98ರಂತೆ ಈ ಹುದ್ದೆಗಳಿಗೆ ಅಧಿಕಾರಿ/ಸಿಬ್ಬಂದಿಗಳನ್ನು ನೇಮಕ ಮಾಡಲಾಗುವುದು. ಆದೇಶ ಸಂಖ್ಯೆ:99ರಿಂದ 107ರಲ್ಲಿ ನೀಡಿರುವ ಸೂಚನೆಗಳಂತೆ ಅವರು ಕರ್ತವ್ಯ ನಿರ್ವಹಿಸುವರು.

**(9) ಸುಬೇದಾರ್ ಮೇಜರ್:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:198ರಂತೆ ಪಡೆಯಲ್ಲಿನ ಹಿರಿಯ ಸ್ಪೆಷಲ್ ಆರ್.ಪಿ.ಐ. ದರ್ಜೆಯ ಅಧಿಕಾರಿಯನ್ನು ಸುಬೇದಾರ್ ಮೇಜರ್ ಹುದ್ದೆಗೆ ನೇಮಕ ಮಾಡಲಾಗುವುದು. ಸಾಮಾನ್ಯವಾಗಿ ಇವರನ್ನು ಕೇಂದ್ರ ದಳದ ಆರ್.ಪಿ.ಐ.ಯನ್ನಾಗಿ ನೇಮಕ ಮಾಡಲಾಗುವುದು. ಆದೇಶ ಸಂಖ್ಯೆ:199ರಿಂದ 216ರಲ್ಲಿ ನೀಡಿರುವ ಸೂಚನೆಗಳಂತೆ ಅವರ ಅಧೀನಕ್ಕೆ ಒಳಪಡುವ ಕಂಪೆನಿಗಳ ಆಡಳಿತ ಮತ್ತು ನಿಯೋಜನೆ, ತರಬೇತಿ, ಶಿಸ್ತು ಕ್ರಮಗಳು, ತರಬೇತಿ ಮತ್ತು ಕಲ್ಯಾಣ ಕಾರ್ಯಕ್ರಮಗಳ ನಿರ್ವಹಣೆಯನ್ನು ನೋಡಿಕೊಳ್ಳುವರು.

**(10) ಕಂಪೆನಿ ಕಮಾಂಡರ್:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:217ರಂತೆ ಸ್ಪೆಷಲ್ ಆರ್.ಪಿ.ಐ. ದರ್ಜೆಯ ಅಧಿಕಾರಿಯನ್ನು ಒಂದು ದಳಕ್ಕೆ ಕಂಪೆನಿ ಕಮಾಂಡರ್ ಆಗಿ ನೇಮಕ ಮಾಡಲಾಗುವುದು. ಆದೇಶ ಸಂಖ್ಯೆ:218ರಿಂದ 234ರಲ್ಲಿ ನೀಡಿರುವ ಸೂಚನೆಗಳಂತೆ ಅವರ ಅಧೀನಕ್ಕೆ ಒಳಪಡುವ ಕಂಪೆನಿಗಳ ಆಡಳಿತ ಮತ್ತು ನಿಯೋಜನೆ, ಶಿಸ್ತು ಕ್ರಮಗಳು, ತರಬೇತಿ ಮತ್ತು ಕಲ್ಯಾಣ ಕಾರ್ಯಕ್ರಮಗಳನ್ನು ನೋಡಿಕೊಳ್ಳುವರು.

**(11) ವಾರದ ಕರ್ತವ್ಯಾಧಿಕಾರಿ (Weekly Officer):**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:235ರಂತೆ ಸಹಾಯಕ ಕಮಾಂಡೆಂಟ್/ಸ್ಪೆಷಲ್ ಆರ್.ಪಿ.ಐ. ದರ್ಜೆಯ ಅಧಿಕಾರಿಯನ್ನು ಪಡೆಯಲ್ಲಿನ ಈ ಹುದ್ದೆಗೆ ನೇಮಕ ಮಾಡಲಾಗುವುದು. ಆದೇಶ ಸಂಖ್ಯೆ:236ರಿಂದ 238ರಲ್ಲಿ ನೀಡಿರುವ ಸೂಚನೆಗಳಂತೆ ಅವರು ಕರ್ತವ್ಯವನ್ನು ನಿರ್ವಹಿಸುವರು.

**(12) ಪ್ಲಟೂನ್ ಕಮಾಂಡರ್:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:239ರಂತೆ ಸ್ಪೆಷಲ್ ಆರ್.ಎಸ್.ಐ. ದರ್ಜೆಯ ಅಧಿಕಾರಿಯನ್ನು ಈ ಹುದ್ದೆಗೆ ನೇಮಕ ಮಾಡಲಾಗುವುದು. ಆದೇಶ ಸಂಖ್ಯೆ:240ರಿಂದ 252ರಲ್ಲಿ ನೀಡಿರುವ ಸೂಚನೆಗಳಂತೆ ಅವರ ಅಧೀನಕ್ಕೆ ಒಳಪಡುವ ಕಂಪೆನಿಯು ಕೇಂದ್ರಸ್ಥಾನದಲ್ಲಿರುವಾಗ ಮತ್ತು ನಿಯೋಜನೆಗೊಂಡ ಸಮಯದಲ್ಲಿನ ಕರ್ತವ್ಯಗಳನ್ನು ಇವರು ನಿರ್ವಹಿಸುವರು.

**(13) ಬೆಟಾಲಿಯನ್ ಹವಿಲ್ದಾರ್ ಮೇಜರ:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:254ರಂತೆ ಓರ್ವ ಹಿರಿಯ ದರ್ಜೆಯ ಸ್ಪೆಷಲ್ ಸಹಾಯಕ ರೆಸರ್ವ್ ಇನ್ಸ್‌ಪೆಕ್ಟರ್‌ರವರನ್ನು ಪಡೆಯಲ್ಲಿನ ಈ ಹುದ್ದೆಗೆ ನೇಮಕ ಮಾಡಲಾಗುವುದು. ಆದೇಶ ಸಂಖ್ಯೆ:254 ಮತ್ತು 255ರಲ್ಲಿ ನೀಡಿರುವ ಸೂಚನೆಗಳಂತೆ ಇವರು ಕರ್ತವ್ಯವನ್ನು ನಿರ್ವಹಿಸುವರು.

**(14) ಕಂಪೆನಿ ಹವಿಲ್ದಾರ್ ಮೇಜರ್:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:256ರಂತೆ ಓರ್ವ ಹಿರಿಯ ದರ್ಜೆಯ ಸ್ಪೆಷಲ್ ಸಹಾಯಕ ರೆಸರ್ವ್ ಇನ್ಸ್‌ಪೆಕ್ಟರ್‌ರವರನ್ನು ಪಡೆಯಲ್ಲಿನ ಈ ಹುದ್ದೆಗೆ ನೇಮಕ ಮಾಡಲಾಗುವುದು. ಆದೇಶ ಸಂಖ್ಯೆ:256ರಿಂದ 261ರಲ್ಲಿ ನೀಡಿರುವ ಸೂಚನೆಗಳಂತೆ ಇವರು ಕರ್ತವ್ಯವನ್ನು ನಿರ್ವಹಿಸುವರು.

**(15) ಪ್ಲಟೂನ್ ಹವಿಲ್ದಾರ್:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:262ರಂತೆ ಓರ್ವ ಹಿರಿಯ ದರ್ಜೆಯ ಹವಿಲ್ದಾರ್‌ರನ್ನು ಈ ಹುದ್ದೆಗೆ ನೇಮಕ ಮಾಡಲಾಗುವುದು. ಆದೇಶ ಸಂಖ್ಯೆ:262ರಿಂದ 264ರಲ್ಲಿ ನೀಡಿರುವ ಸೂಚನೆಗಳಂತೆ ಇವರು ಕರ್ತವ್ಯವನ್ನು ನಿರ್ವಹಿಸುವರು.

**(16) ಕರ್ತವ್ಯ ಅಧಿಕಾರಿ:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:265ರಂತೆ ಹವಿಲ್ದಾರ್/ಸ್ಪೆಷಲ್ ಎಆರ್ಎಸ್ಐ/ ಸ್ಪೆಷಲ್ ಆರ್ಎಸ್ಐ ಹುದ್ದೆಯ ಅಧಿಕಾರಿಯನ್ನು ಈ ಹುದ್ದೆಗೆ ನೇಮಕ ಮಾಡಲಾಗುವುದು. ಆದೇಶ ಸಂಖ್ಯೆ:265ರಿಂದ 273ರಲ್ಲಿ ನೀಡಿರುವ ಸೂಚನೆಗಳಂತೆ ಇವರು ಕರ್ತವ್ಯ ನಿರ್ವಹಿಸುವರು.

**(17) ವಿಭಾಗ ಕಮಾಂಡರ್:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:274ರಂತೆ ಓರ್ವ ಸಿಬ್ಬಂದಿಯನ್ನು ಈ ಹುದ್ದೆಗೆ ನೇಮಕ ಮಾಡಲಾಗುವುದು. ಆದೇಶ ಸಂಖ್ಯೆ:274 ಮತ್ತು 275ರಲ್ಲಿ ನೀಡಿರುವ ಸೂಚನೆಗಳಂತೆ ಇವರು ಕರ್ತವ್ಯ ನಿರ್ವಹಿಸುವರು.

**(18) ಕಂಪೆನಿ ಕ್ಲರ್ಕ್:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:276ರಂತೆ ಓರ್ವ ಸಿಬ್ಬಂದಿಯನ್ನು ಈ ಹುದ್ದೆಗೆ ನೇಮಕ ಮಾಡಲಾಗುವುದು. ಆದೇಶ ಸಂಖ್ಯೆ:276ರಿಂದ 280ರಲ್ಲಿ ನೀಡಿರುವ ಸೂಚನೆಗಳಂತೆ ಇವರು ಕರ್ತವ್ಯ ನಿರ್ವಹಿಸುವರು.

**(19) ಕಂಪೆನಿ ಕ್ವಾರ್ಟರ್ ಮಾಸ್ಟರ್:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:281ರಂತೆ ಓರ್ವ ಸಿಬ್ಬಂದಿಯನ್ನು ಈ ಹುದ್ದೆಗೆ ನೇಮಕ ಮಾಡಲಾಗುವುದು. ಆದೇಶ ಸಂಖ್ಯೆ:281ರಿಂದ 289ರಲ್ಲಿ ನೀಡಿರುವ ಸೂಚನೆಗಳಂತೆ ಇವರು ಕರ್ತವ್ಯ ನಿರ್ವಹಿಸುವರು.

**(20) ಪೊಲೀಸ್ ಕಾನ್ಸಟೇಬಲ್:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:290ರಿಂದ 300ರಲ್ಲಿ ನೀಡಿರುವ ಸೂಚನೆಗಳಂತೆ ಇವರುಗಳು ಕರ್ತವ್ಯ ನಿರ್ವಹಿಸುವರು.

**(21) ಫೊಲೊವರ್ ಜಮೆದಾರ್:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:301ರಲ್ಲಿ ನೀಡಿರುವ ಸೂಚನೆಗಳಂತೆ ಇವರುಗಳು ಕರ್ತವ್ಯ ನಿರ್ವಹಿಸುವರು.

**(22) ಫೊಲೊವರ್:**

ಕೆ.ಎಸ್.ಆರ್.ಪಿ. ಮ್ಯಾನುವೆಲ್–1999 ಭಾಗ–4ರ ಆದೇಶ ಸಂಖ್ಯೆ:302ರಲ್ಲಿನ ಸೂಚನೆಗಳಂತೆ ಇವರುಗಳನ್ನು ನೇಮಕಾತಿ ಮಾಡಿಕೊಳ್ಳಲಾಗುತ್ತಿದ್ದು, ಆದೇಶ ಸಂಖ್ಯೆ:303ರಲ್ಲಿ ನೀಡಿರುವ ಸೂಚನೆಗಳಂತೆ ಕರ್ತವ್ಯ ನಿರ್ವಹಿಸುವರು.

**(23) ಸಹಾಯಕ ಆಡಳಿತಾಧಿಕಾರಿ (ಶ್ರೀ ಕೆ.ಭುಜಂಗ ಆಚಾರ್):**

1. ಲಿಪಿಕ ಸಿಬ್ಬಂದಿ ಮತ್ತು **'ಡಿ'** ವೃಂದ ಸಿಬ್ಬಂದಿಗಳ ಕರ್ತವ್ಯದ ಮೇಲ್ವಿಚಾರಣೆ.
2. ಕೆಳಹಂತದ ಅಧಿಕಾರಿಗಳಿಗೆ ನೀಡಬೇಕಾದ ಪತ್ರ ವ್ಯವಹಾರಗಳ ಶುದ್ಧ ಪ್ರತಿಗೆ ಸಹಿ ಮಾಡುವುದು.
3. ರಹಸ್ಯ ಮಾಹಿತಿ ಒಳಪಡದ ಇತರೆ ಮಾಹಿತಿ(data) ಗಳನ್ನು (ಸರ್ಕಾರವನ್ನು ಹೊರತುಪಡಿಸಿ) ಮೇಲಾಧಿಕಾರಿಗಳಿಗೆ ಒಪ್ಪಿಸುವುದು
4. ರಹಸ್ಯ ಕಡತಗಳನ್ನು ಹೊರತು ಪಡಿಸಿ ಸೇವಾ ಪುಸ್ತಕ, ಆದೇಶ ಪುಸ್ತಕ ಮತ್ತು ಇತರೆ ದಾಖಲಾತಿಗಳನ್ನು ಧೃಢೀಕರಿಸಿ ಸಹಿ ಮಾಡುವುದು.
5. ಸೂಕ್ತ ಪ್ರಾಧಿಕಾರದಿಂದ ನೇಮಿಸಲ್ಪಟ್ಟಾಗ ಸಿಸಿಎ ನಿಯಮಾವಳಿಗಳ ಪ್ರಕಾರ ವಿಚಾರಣಾ ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸುವುದು.
6. ಬಟವಾಡೆ ಅಧಿಕಾರಿಯಾಗಿ ವೇತನ ಬಿಲ್, ಎಸಿ/ಡಿಸಿ ಬಿಲ್ಲುಗಳಿಗೆ ಸಹಿ ಮಾಡುವುದು.
7. ಅಪತ್ರಾಂಕಿತ ದರ್ಜೆಯ ಸಿಬ್ಬಂದಿಗಳ ಪ್ರಯಾಣ ಭತ್ತೆ ಬಿಲ್ ಮತ್ತು ವಾರಂಟ್ ಬಿಲ್‌ಗಳಿಗೆ ಸಹಿ ಮಾಡುವುದು.
8. ಪ್ರತಿ ದಿನ ನಗದು ಶಾಖೆಯ ಬಾಕಿ ಪರಿಶೀಲಿಸುವುದು ಮತ್ತು ನಗದು ವಹಿಯಲ್ಲಿ ಪ್ರತಿ ದಿನ ಮತ್ತು ಮಾಹೆಯ ಲೆಕ್ಕ ಪತ್ರಗಳನ್ನು ಪರಿಶೀಲಿಸಿ ಮೇಲು ಸಹಿ ಮಾಡುವುದು.
9. ಕೆಎಟಿ ಮತ್ತು ಇತರೆ ನ್ಯಾಯಾಲಯ ಪ್ರಕರಣಗಳ ಕಡತ ನಿರ್ವಹಿಸುವುದು.
10. ಮಾಹಿತಿ ಹಕ್ಕು ಅಧಿ ನಿಯಮ–2005ರ ಸೆಕ್ಷನ್ 5(1)ರಂತೆ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸುವುದು.
11. ಕಮಾಂಡೆಂಟ್‌ರವರು ನಿರ್ದಿಷ್ಟವಾಗಿ ವಹಿಸುವ ಇತರೆ ಕರ್ತವ್ಯಗಳನ್ನು ನಿರ್ವಹಿಸುವುದು.

**(24) ಶಾಖಾಧೀಕ್ಷಕರು (ಖಾಲಿ ಹುದ್ದೆ) – ಶ್ರೀ ಎ.ಬಿ.ನಟರಾಜ್, ಪ್ರ.ದ.ಸ. (ಹೆಚ್ಚಿನ ಪ್ರಭಾರ):**

1. ಕಛೇರಿಗೆ ಒಳ ಬರುವಂತಹ ಅ.ಸ.ಪತ್ರ, ಗೌಪ್ಯ/ರಹಸ್ಯವಲ್ಲದ ಟಪ್ಪಾಲುಗಳನ್ನು ಸ್ವೀಕರಿಸಿ ತೆರೆದು ವಿಳಂಬ ಮಾಡದೆ ಮೇಲಾಧಿಕಾರಿಗಳ ಗಮನಕ್ಕೆ ಮಂಡಿಸುವುದು.
2. ಸಿಬ್ಬಂದಿ ಮತ್ತು ಲೆಕ್ಕ ಶಾಖೆಯ ಎಲ್ಲಾ ವಿಷಯ ನಿರ್ವಾಹಕರ ಉಸ್ತುವಾರಿ ನಡೆಸುವುದು.
3. ಕೆಎಫ್‌ಸಿ 1958ರ ಆರ್ಟಿಕಲ್ 330ರಂತೆ ನಗದು ಶಾಖೆಯ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿ ಸುಸ್ಥಿಯಲ್ಲಿ ನಿರ್ವಹಿಸಿಕೊಂಡು ಬರುವಲ್ಲಿ ಉಸ್ತುವಾರಿ ವಹಿಸುವುದು.
   (ಅ) ಎಲ್ಲಾ ಸ್ವೀಕೃತಿ ಮತ್ತು ಪಾವತಿಗಳನ್ನು ನಗದು ಪುಸ್ತಕದಲ್ಲಿ ದಾಖಲಿಸುವ ಬಗ್ಗೆ.
   (ಆ) ನಗದು ಪುಸ್ತಕದಲ್ಲಿ ಪ್ರತಿ ತಿಂಗಳ ಅಂತ್ಯಕ್ಕೆ ಗೋಶ್ವಾರೆ ಹಾಕಿ ಬಾಕಿ ಮೊತ್ತ ನಮೂದಿಸಿದ ಬಗ್ಗೆ
   (ಇ) ನಮೂನೆ–61ರಲ್ಲಿ ಖಜಾನೆಗೆ ಸಲ್ಲಿಸುವ ಪಾವತಿಯ ಬಗ್ಗೆ.
   (ಈ) ಅಕ್ವಿಟೆನ್ಸ್ ರೋಲ್.
   (ಉ) ಸಾದಿಲ್ವಾರು ವೆಚ್ಚಗಳ ಆದೇಶದ ಪುಸ್ತಕನಿರ್ವಹಣೆ.
   (ಊ) ಸಾದಿಲ್ವಾರು ವೆಚ್ಚಗಳ ವಹಿ.
4. ಪ್ರತಿ ದಿನ ಸ್ಟಾಂಪ್ ಖರ್ಚುವೆಚ್ಚಗಳ ಲೆಕ್ಕ ಮತ್ತು ವಹಿಗಳನ್ನು ಪರಿಶೀಲಿಸುವುದು.
5. ಲೇಖನ ಸಾಮಗ್ರಿಗಳನ್ನು ಮತ್ತು ನಮೂನೆಗಳನ್ನು ನೀಡಿದ ಬಗ್ಗೆ ಪರಿಶೀಲಿಸುವುದು.
6. ಎಲ್ಲಾ ಲೆಕ್ಕ ಪರಿಶೋಧನಾಳ ಕಡತ ನಿರ್ವಹಿಸುವುದು ಮತ್ತು ಆಕ್ಷೇಪಣೆಗಳಿಗೆ ಉತ್ತರಗಳನ್ನು ಅಧೀನ ಅಧಿಕಾರಿಗಳಿಂದ ಪಡೆದು ವಿಲೇ ಆಗುವಂತೆ ನೋಡಿಕೊಳ್ಳುವುದು.
7. ಸಿಬ್ಬಂದಿ ಮತ್ತು ಲೆಕ್ಕಪತ್ರ ಶಾಖೆಯ ಮಾಹಿತಿ ಹಕ್ಕು ಅಧಿನಿಯಮ–2005/ಕೆ.ಎ.ಟಿ./ಇತರೆ ನ್ಯಾಯಾಲಯಗಳಲ್ಲಿ ದಾಖಲಿಸಿರುವ ಪ್ರಕರಣಗಳ ಪತ್ರ ವ್ಯವಹಾರಗಳ ಮತ್ತು ಕಡತಗಳ ನಿರ್ವಹಣೆ ಉಸ್ತುವಾರಿ ನೋಡಿಕೊಳ್ಳುವುದು.
8. ಕಮಾಂಡೆಂಟ್/ಎಎಒ ರವರು ವಹಿಸುವ ಇತರೆ ಕರ್ತವ್ಯಗಳನ್ನು ನಿರ್ವಹಿಸುವುದು.

**(25) ನಗದು ಶಾಖೆ (ಶ್ರೀಮತಿ ಶರಣಿತ, ಪ್ರಥಮ ದರ್ಜೆ ಸಹಾಯಕರು):**

1. ನಗದು ಮತ್ತು ನಗದು ವಹಿ ನಿರ್ವಹಣೆ.
2. ಪ್ರತಿ ತಿಂಗಳ ಅಂತ್ಯಕ್ಕೆ ನಗದು ಪುಸ್ತಕದಲ್ಲಿ ಬಾಕಿ ತ:ಖ್ತೆ ತಯಾರಿಸುವುದು ಮತ್ತು ಕಳುಹಿಸಿ ಕೊಡಲು ಬಾಕಿ ಇರುವ ಡಿಡಿಗಳನ್ನು ಪತ್ರ/ಜ್ಞಾಪನದ ಮೂಲಕ ಸಂಬಂಧಪಟ್ಟರಿಗೆ ಕಳುಹಿಸಿಕೊಡುವುದು.
3. ಆರೋಗ್ಯ ಭಾಗ್ಯ ಯೋಜನೆಯ ಮಾಸಿಕ ಕಂತು ಪಾವತಿಯೂ ಸೇರಿದಂತೆ ನಗದು ಶಾಖೆಗೆ ಸಂಬಂಧಪಟ್ಟ ವಹಿಗಳನ್ನು ನಿರ್ವಹಿಸುವುದು.
4. ಬಿ.ಎಫ್. ಮತ್ತು ಸ್ಪೋರ್ಟ್ಸ್ ಫಂಡ್‌ಗಳ ನಗದು ವ್ಯವಹಾರ ಮತ್ತು ಪುಸ್ತಕಗಳ ನಿರ್ವಹಣೆ.
5. ನಗದು ಶಾಖೆಗೆ ಸಂಬಂಧಿಸಿದ ಕೆಎಟಿ/ಇತರೆ ನ್ಯಾಯಾಲಯ ಪ್ರಕರಣಗಳ ಮತ್ತು ಮಾಹಿತಿ ಹಕ್ಕು ಅಧಿನಿಯಮ–2005ರ ಪ್ರಕರಣಗಳ ಪತ್ರ ವ್ಯವಹಾರಗಳು ಮತ್ತು ಕಡತಗಳ ನಿರ್ವಹಣೆ.
6. ಕಮಾಂಡೆಂಟ್/ಎಎಒ/ಶಾಖಾಧೀಕ್ಷಕರು ವಹಿಸುವ ಇತರೆ ಕರ್ತವ್ಯಗಳನ್ನು ನಿರ್ವಹಿಸುವುದು

**(26) ಲೆಕ್ಕ ಶಾಖೆ–1 (ಶ್ರೀ ಎ.ಬಿ.ನಟರಾಜ, ಪ್ರಥಮ ದರ್ಜೆ ಸಹಾಯಕ):**

1. ಮಾಸಿಕ ವೇತನ ಬಿಲ್, ಸಪ್ಲಿಮೆಂಟರಿ, ರಜಾ ವೇತನ, ರಜಾ ಅಲೋವೆನ್ಸ್,ಸಮವಸ್ತ್ರ ಭತ್ತೆ, ಗಳಿಕೆ ರಜಾ ನಗದೀಕರಣ ಬಿಲ್‌ಗಳನ್ನು ತಯಾರಿಸುವುದು ಮತ್ತು LPC ಕಳುಹಿಸಿ ಕೊಡುವುದು.
2. ವಾರ್ಷಿಕ ಆಯವ್ಯಯ ತಯಾರಿಸುವುದು.
3. ಎಎನ್‌ಎಫ್ ಘಟಕಕ್ಕೆ ನಿಯೋಜನೆಯಲ್ಲಿರುವ ಅಧಿಕಾರಿ/ಸಿಬ್ಬಂದಿಗಳ ವೇತನ ಬಿಲ್ ತಯಾರಿಸುವುದು.
4. ಮೇಲೆ ನಮೂದಿಸಿದ ಎಲ್ಲಾ ಬಿಲ್‌ಗಳ ಬಗ್ಗೆ ಸ್ವೀಕೃತಿ, ಲಾಂಗ್ ರೋಲ್, ವೇತನ ತಡೆಹಿಡಿದ ಪ್ರಕರಣಗಳ ಕಡತಗಳ ನಿರ್ವಹಣೆ.
5. ಜಿಪಿಎಫ್/ಹೆಚ್‌ಬಿಎ/ಹೆಚ್‌ಪಿಎ/ಬೈಸಿಕಲ್/ಎಂಸಿಎ/ಹ್ಯಾಂಡ್‌ಲೂಮ್/ಹಬ್ಬದ ಮುಂಗಡ/ಕೆಜಿಐಡಿ/ಮುಂಗಡ ವೇತನ ಹಾಗೂ ಸಾಲಗಳ ಮಂಜೂರಾತಿ ಕಡತಗಳ ನಿರ್ವಹಣೆ ಮತ್ತು ಬಿಲ್‌ಗಳ ತಯಾರಿ.
6. ಜಿಪಿಎಫ್/ಹೆಚ್‌ಬಿಎ/ಹೆಚ್‌ಪಿಎ/ಬೈಸಿಕಲ್/ಎಂಸಿಎ/ಹ್ಯಾಂಡ್‌ಲೂಮ್/ಹಬ್ಬದ ಮುಂಗಡ/ಕೆಜಿಐಡಿ/ಮುಂಗಡ ವೇತನ ಹಾಗೂ ಸಾಲಗಳ ಮರು ಪಾವತಿ ಕಡತಗಳ ನಿರ್ವಹಣೆ.
7. ನಿವೃತ್ತಿ ಮತ್ತು ನಿಧನ ಹೊಂದಿನ ಅಧಿಕಾರಿ/ಸಿಬ್ಬಂದಿಗಳ ಇಎಫ್‌ಬಿಎಫ್ ಮತ್ತು ಇಜಿಐಎಸ್ ಪಾವತಿ ಕಡತಗಳ ನಿರ್ವಹಣೆ.
8. ಲೆಕ್ಕ–1 ಶಾಖೆಗೆ ಸಂಬಂಧಿಸಿದ ಕೆಎಟಿ/ಇತರೆ ನ್ಯಾಯಾಲಯ ಪ್ರಕರಣಗಳ ಮತ್ತು ಮಾಹಿತಿ ಹಕ್ಕು ಅಧಿನಿಯಮ–2005ರ ಪ್ರಕರಣಗಳ ಪತ್ರ ವ್ಯವಹಾರಗಳು ಮತ್ತು ಕಡತಗಳ ನಿರ್ವಹಣೆ.
9. ಕಮಾಂಡೆಂಟ್/ಎಎಒ/ಶಾಖಾಧೀಕ್ಷಕರು ವಹಿಸುವ ಇತರೆ ಕರ್ತವ್ಯಗಳನ್ನು ನಿರ್ವಹಿಸುವುದು.

**(27) ಲೆಕ್ಕ ಶಾಖೆ–2 (ಶ್ರೀ ಎ.ಸುನಿಲ್ ಕುಮಾರ್, ದ್ವಿತೀಯ ದರ್ಜೆ ಸಹಾಯಕ):**

1. ಲೇಖನ ಸಾಮಗ್ರಿಗಳ ಮತ್ತು ಇತರೆ ಸಾಮಗ್ರಿಗಳ ಸ್ಟಾಕ್ ವಹಿಗಳ ನಿರ್ವಹಣೆ.
2. ಬಸ್ ವಾರಂಟು/ರೈಲ್ವೇ ವಾರಂಟು ಮತ್ತು ಅದಕ್ಕೆ ಸಂಬಂಧಿಸಿದ ಸ್ಟಾಕ್ ವಹಿಗಳ ನಿರ್ವಹಣೆ.
3. ಹಳೆಯ ದಾಖಲೆಗಳ ಮತ್ತು ದಾಖಲೆಗಳ ಕೊಠಡಿಯ ನಿರ್ವಹಣೆ.
4. ವಾರ್ಷಿಕ ಆಡಳಿತ ವರದಿಗಳನ್ನು ತಯಾರಿಸುವುದು.
5. ಆದೇಶ ಪುಸ್ತಕ, ಗಜೆಟ್, ಸರ್ಕಾರಿ ಆದೇಶಗಳು, ಎಲ್‌ಎಸ್‌ಸಿ ಮತ್ತು ಜರ್ನಲ್‌ಗಳ ನಿರ್ವಹಣೆ.
6. ವಿವಿಧ ನಿಯಮಾವಳಿಗಳ ಪುಸ್ತಕ ಖರೀದಿ ಮತ್ತು ಕಛೇರಿ ಯಂತ್ರೋಪಕರಣಗಳ ದುರಸ್ತಿ ಕಡತಗಳ ನಿರ್ವಹಣೆ.
7. ಡಿಸಿ ಮತ್ತು ಎಸಿ ಬಿಲ್‌ಗಳನ್ನು ತಯಾರಿಸುವುದು.
8. ಮಾಸಿಕ ವೆಚ್ಚ ಪಟ್ಟಿ ತಯಾರಿಸುವುದು.
9. ವೈದ್ಯಕೀಯ ವೆಚ್ಚ ಮರುಪಾವತಿ ಮತ್ತು ಆರೋಗ್ಯ ಭಾಗ್ಯ ವೆಚ್ಚ ಮರುಪಾವತಿ ಬಿಲ್ಲುಗಳನ್ನು ತಯಾರಿಸುವುದು.

**(28) ಲೆಕ್ಕ–3 ಶಾಖೆ (ದ್ವಿ.ದ.ಸ. ರಿಕ್ತ ಹುದ್ದೆ) (ಶ್ರೀ ಎ.ಸುಬ್ಬಪ್ಪ, ದ್ವಿ.ದ.ಸ. ಹೆಚ್ಚಿನ ಪ್ರಭಾರ):**

1. ಎಲ್ಲಾ ಪ್ರಯಾಣ ಭತ್ತೆ, ಪ್ರಯಾಣ ಮುಂಗಡ, ವರ್ಗಾವಣೆ ಅನುದಾನ/ವರ್ಗಾವಣೆ ಪ್ರಯಾಣ ಭತ್ತೆ, ಆಹಾರ ಭತ್ತೆ, ಸ್ವಂತ ಊರಿಗೆ ಪ್ರಯಾಣ ಬಿಲ್ಲುಗಳನ್ನು ತಯಾರಿಸುವುದು.
2. ಪ್ರಯಾಣ ಮುಂಗಡ ಕಡಿತಗೊಳಿಸದ ಬಗ್ಗೆ ಕಡತಗಳ ನಿರ್ವಹಣೆ.
3. ಕೆಎಸ್‌ಆರ್‌ಟಿಸಿ ಬಸ್ಸುಗಳನ್ನು ಬಾಡಿಗೆಗೆ ಪಡೆದ ಬಿಲ್ಲುಗಳನ್ನು ತಯಾರಿಸುವುದು ಹಾಗೂ ಅದಕ್ಕೆ ಸಂಬಂಧಪಟ್ಟ ಪತ್ರ ವ್ಯವಹಾರ ಮತ್ತು ಕಡತಗಳ ನಿರ್ವಹಣೆ.
4. ವಾಹನ ಸಾರಿಗೆ ಮತ್ತು ಶಿಬಿರ ನಾಯಕರ ಶಾಖೆಗೆ ಸಂಬಂಧಪಟ್ಟ ಪತ್ರ ವ್ಯವಹಾರಗಳ ಪರಿಶೀಲನೆ ಮತ್ತು ಉಸ್ತುವಾರಿ.
5. ಲೆಕ್ಕ–3 ಶಾಖೆಗೆ ಸಂಬಂಧಿಸಿದ ಕೆಎಟಿ/ಇತರೆ ನ್ಯಾಯಾಲಯ ಪ್ರಕರಣಗಳ ಮತ್ತು ಮಾಹಿತಿ ಹಕ್ಕು ಅಧಿನಿಯಮ–2005ರ ಪ್ರಕರಣಗಳ ಪತ್ರ ವ್ಯವಹಾರಗಳು ಮತ್ತು ಕಡತಗಳ ನಿರ್ವಹಣೆ.
6. ಕಮಾಂಡೆಂಟ್/ಎಎಓ/ಶಾಖಾಧೀಕ್ಷಕರು ವಹಿಸುವ ಇತರೆ ಕರ್ತವ್ಯಗಳನ್ನು ನಿರ್ವಹಿಸುವುದು.

**(29) ಸಿಬ್ಬಂದಿ–1 ಶಾಖೆ (ಶ್ರೀ ಮಹಮ್ಮದ್ ರಫೀಕ್, ಪ್ರಥಮ ದರ್ಜೆ ಸಹಾಯಕರು):**

1. ಹೊಸ ನೇಮಕಾತಿಗಳು, ವರ್ಗಾವಣೆ, ನಿಯೋಜನೆ, ತರಬೇತರಿಗೆ ಸಂಬಂಧಪಟ್ಟ ಪತ್ರ ವ್ಯವಹಾರಗಳು.
2. ರಾಜೀನಾಮೆ ಮತ್ತು ಸೇವೆಯಿಂದ ವಜಾಗೊಳಿಸಿದ ಪ್ರಕರಣಗಳ ಪತ್ರ ವ್ಯವಹಾರಗಳು.
3. ನೇಮಕಾತಿ, ರಿಕ್ತ ಹುದ್ದೆಗಳ ಮಾಹಿತಿ ತ:ಖ್ತೆ, ಜಾತಿಗಳ ವಿಂಗಡಣೆ ಪುಸ್ತಕ (roster register of castes), ನಿಯೋಜನೆ ಕಡತಗಳ ನಿರ್ವಹಣೆ.
4. ಅಧಿಕಾರಿ ಮತ್ತು ಸಿಬ್ಬಂದಿಗಳ ಮಾಸಿಕ/ ತ್ರೈಮಾಸಿಕ ತ:ಖ್ತೆ ಕಳುಹಿಸುವುದು.
5. ಖಾಯಂಪೂರ್ವ ಸೇವಾವಧಿ ಘೋಷಣೆ ಕಡತಗಳ ನಿರ್ವಹಣೆ.
6. ಆಸ್ತಿ ಖರೀದಿಗೆ ಸಂಬಂಧಿಸಿದ ಪತ್ರ ವ್ಯವಹಾರಗಳ ನಿರ್ವಹಣೆ.
7. ಪ್ರಭಾರ ಭತ್ತೆ ಮಂಜೂರಾತಿಗೆ ಸಂಬಂಧಿಸಿದ ಪತ್ರ ವ್ಯವಹಾರಗಳ ನಿರ್ವಹಣೆ.
8. ಇಲಾಖಾ ಪರೀಕ್ಷೆಗಳಿಗೆ ಸಲ್ಲಿಸಿದ ಅರ್ಜಿಗಳ ಪತ್ರ ವ್ಯವಹಾರಗಳ ನಿರ್ವಹಣೆ.
9. ಸಂತಾಪ ಸೂಚಕ ಸಂದೇಶಗಳ ಪತ್ರ ವ್ಯವಹಾರಗಳು.
10. ಪ್ರತಿ ವರ್ಷದ ಪ್ರಾರಂಭದಲ್ಲಿ ಅಧಿಕಾರಿ/ಸಿಬ್ಬಂದಿಗಳ ಲಾಂಗ್ ರೋಲ್ ತೆರೆದು ಲೆಕ್ಕ–1 ಶಾಖೆಗೆ ನೀಡುವ ಕರ್ತವ್ಯ.
11. ಹೊಸದಾಗಿ ನೇಮಕಗೊಂಡ ಅಧಿಕಾರಿ/ಸಿಬ್ಬಂದಿಗಳ ಸೇವಾ ಪುಸ್ತಕ ತೆರೆದು ಮಾಹಿತಿಯೊಂದಿಗೆ ಸಿಬ್ಬಂದಿ–2 ಶಾಖೆಗೆ ನೀಡುವ ಕರ್ತವ್ಯ.
12. ಅನುಕಂಪದ ಆಧಾರದ ನೇಮಕಾತಿಗಳು.
13. ಲೆಕ್ಕ–1 ಶಾಖೆಗೆ ಸಂಬಂಧಿಸಿದ ಕೆಎಟಿ/ಉಚ್ಚ ನ್ಯಾಯಾಲಯ ಪ್ರಕರಣಗಳ ಮತ್ತು ಮಾಹಿತಿ ಹಕ್ಕು ಅಧಿನಿಯಮ–2005ರ ಪ್ರಕರಣಗಳ ಪತ್ರ ವ್ಯವಹಾರಗಳು ಮತ್ತು ಕಡತಗಳ ನಿರ್ವಹಣೆ.
14. ಕಮಾಂಡೆಂಟ್/ಎಎಓ/ಶಾಖಾಧೀಕ್ಷಕರು ವಹಿಸುವ ಇತರೆ ಕರ್ತವ್ಯಗಳನ್ನು ನಿರ್ವಹಿಸುವುದು.

**(30) ಸಿಬ್ಬಂದಿ–2 ಶಾಖೆ (ಶ್ರೀ ಎ.ಸುಬ್ಬಪ್ಪ, ದ್ವಿತೀಯ ದರ್ಜೆ ಸಹಾಯಕರು):**

1. ಅಧಿಕಾರಿ/ಸಿಬ್ಬಂದಿಗಳ ವಯೋ ನಿವೃತ್ತಿ/ಸ್ವಇಚ್ಛಾ ನಿವೃತ್ತಿಯ ಪತ್ರ ವ್ಯವಹಾರಗಳು/ಕಡತಗಳ ನಿರ್ವಹಣೆ.
2. 25 ವರ್ಷ ಸೇವೆ ಸಲ್ಲಿಸಿದ ಅಧಿಕಾರಿ/ಸಿಬ್ಬಂದಿಗಳ ಮಾಹಿತಿಗಳ ಕಡತ ನಿರ್ವಹಣೆ.

3. 12 ತಿಂಗಳುಗಳ ಒಳಗೆ ಸೇವೆಯಿಂದ ನಿವೃತ್ತಿ ಹೊಂದುವ ಅಧಿಕಾರಿ/ಸಿಬ್ಬಂದಿಗಳಿಗೆ ಸಂಬಂಧಿಸಿದ ಪತ್ರ ವ್ಯವಹಾರಗಳು.
4. ನಿವೃತ್ತ ಅಧಿಕಾರಿ/ಸಿಬ್ಬಂದಿಗಳ ಕುಟುಂಬ ಪಿಂಚಣಿಗೆ ಸಂಬಂಧಪಟ್ಟ ಪತ್ರ ವ್ಯವಹಾರಗಳು.
5. ಪಿಂಚಣಿಗೆ ಸಂಬಂಧಿಸಿದ ಮಾಸಿಕ/ತ್ರೈಮಾಸಿಕ ಪಟ್ಟಿಗಳಿಗೆ ಸಂಬಂಧಿಸಿದ ಪತ್ರವ್ಯವಹಾರಗಳು.
6. ವಯೋ ನಿವೃತ್ತಿ ಪಿಂಚಣಿಗೆ ಸಂಬಂಧಿಸಿದ ಪತ್ರ ವ್ಯವಹಾರಗಳು ಮತ್ತು ಕಡತಗಳ ನಿರ್ವಹಣೆ.
7. ಹೊಸತಾಗಿ ನೇಮಕಾತಿಗೊಂಡ ಅಧಿಕಾರಿ/ಸಿಬ್ಬಂದಿಗಳ ಸೇವಾ ಪುಸ್ತಕ/ನಾಮಾವಳಿ ಪಟ್ಟಿ ತೆರೆದು ನಿರ್ವಹಿಸುವುದು.
8. ಎಲ್ಲಾ ಅಧಿಕಾರಿ/ಸಿಬ್ಬಂದಿಗಳ ಸೇವಾ ಪುಸ್ತಕದಲ್ಲಿ ಕುಟುಂಬ ಸದಸ್ಯರ ನಾಮಾವಳಿ ಪಟ್ಟಿ ಪಡೆದು ನಿರ್ವಹಿಸುವ ಕರ್ತವ್ಯ.
9. ಹೆಚ್‌ಟಿಸಿ/ಎಲ್‌ಟಿಸಿ ಮತ್ತು ಸಂತಾನ ಶಸ್ತ್ರ ಚಿಕಿತ್ಸೆಗೆ ಸಂಬಂಧಪಟ್ಟ ಪತ್ರ ವ್ಯವಹಾರಗಳು.
10. ಸೇವೆಗೆ ಸಂಬಂಧಿಸಿದ ಎಲ್ಲಾ ಆದೇಶಗಳನ್ನು ಸೇವಾ ಪುಸ್ತಕದಲ್ಲಿ ದಾಖಲಿಸುವ ಕರ್ತವ್ಯ.
11. ಅಧಿಕಾರಿ/ಸಿಬ್ಬಂದಿಗಳ ಎಲ್ಲಾ ವಿಧದ ರಜೆ ಮಂಜೂರಾತಿ ಕಡತಗಳಿಗೆ ಸಂಬಂಧಿಸಿದ ಪತ್ರ ವ್ಯವಹಾರಗಳು ಮತ್ತು ಕಡತಗಳ ನಿರ್ವಹಣೆ.
12. ಅಧಿಕಾರಿ/ಸಿಬ್ಬಂದಿಗಳ ವೇತನ ನಿಗದಿ, ವೇತನ ಭಡ್ತಿ, 10, 15, 20 ವರ್ಷಗಳ ವೇತನ ಭಡ್ತಿಗಳಿಗೆ ಸಂಬಂಧಿಸಿದ ಪತ್ರ ವ್ಯವಹಾರಗಳು.
13. ವೇತನ ಭಡ್ತಿಗಳಿಗೆ ಸಂಬಂಧಿಸಿದ ವಹಿ ನಿರ್ವಹಣೆ ಮತ್ತು ಪ್ರತಿ ವರ್ಷದ ಮಾರ್ಚ್ ಅಂತ್ಯದಲ್ಲಿ ಸೇವಾ ಪುಸ್ತಕಗಳ ಪರಿಶೀಲನೆ.
14. ಸಿಬ್ಬಂದಿ–2 ಶಾಖೆಗೆ ಸಂಬಂಧಿಸಿದ ಕೆಎಟಿ/ಉಚ್ಚ ನ್ಯಾಯಾಲಯ ಪ್ರಕರಣಗಳ ಮತ್ತು ಮಾಹಿತಿ ಹಕ್ಕು ಅಧಿನಿಯಮ–2005ರ ಪ್ರಕರಣಗಳ ಪತ್ರ ವ್ಯವಹಾರಗಳು ಮತ್ತು ಕಡತಗಳ ನಿರ್ವಹಣೆ.
15. ಕಮಾಂಡೆಂಟ್/ಎಎಒ/ಶಾಖಾಧೀಕ್ಷಕರು ವಹಿಸುವ ಇತರೆ ಕರ್ತವ್ಯಗಳನ್ನು ನಿರ್ವಹಿಸುವುದು.

**(31) ಟಪ್ಪಾಲು ಶಾಖೆ (ಶ್ರೀ ಪಿ.ಎಸ್.ನವೀನ, ದ್ವಿತೀಯ ದರ್ಜೆ ಸಹಾಯಕ):**

1. ಟಪ್ಪಾಲುಗಳ ಸ್ವೀಕೃತಿ ಮತ್ತು ಸಂಬಂಧಪಟ್ಟ ಶಾಖೆಗಳಿಗೆ ಅವುಗಳ ವಿತರಣೆ.
2. ವಿವಿಧ ಶಾಖೆಗಳಿಂದ ಪಡೆದಂತಹ ಪತ್ರ/ಕಡತಗಳ ರವಾನೆ.
3. ಒಳ ಬರುವ ಮತ್ತು ಹೊರಗೆ ಕಳುಹಿಸುವ ಪತ್ರಗಳ ರವಾನೆ ಕಡತಗಳ ನಿರ್ವಹಣೆ.
4. ಅಂಚೆ ಚೀಟಿಗಳ ಲೆಕ್ಕ ಕಡತಗಳ ನಿರ್ವಹಣೆ.
5. ಲೆಕ್ಕ–2 ಶಾಖೆಗೆ ಸಂಬಂಧಿಸಿದ ಕೆಎಟಿ/ಇತರೆ ನ್ಯಾಯಾಲಯ ಪ್ರಕರಣಗಳ ಮತ್ತು ಮಾಹಿತಿ ಹಕ್ಕು ಅಧಿನಿಯಮ–2005ರ ಪ್ರಕರಣಗಳ ಪತ್ರ ವ್ಯವಹಾರಗಳು ಮತ್ತು ಕಡತಗಳ ನಿರ್ವಹಣೆ.
6. ಕಮಾಂಡೆಂಟ್/ಎಎಒ/ಶಾಖಾಧೀಕ್ಷಕರು ವಹಿಸುವ ಇತರೆ ಕರ್ತವ್ಯಗಳನ್ನು ನಿರ್ವಹಿಸುವುದು

**(32) ಸಿಬ್ಬಂದಿ–3 ಶಾಖೆ(ಶ್ರೀ ಮಹೇಶ, ದ್ವಿತೀಯ ದರ್ಜೆ ಸಹಾಯಕರು):**

1. ನಿಯಮ 6 ಕೆಎಸ್‌ಪಿ (ಡಿಪಿ) ನಿಯಮಾವಳಿಗಳು 1965/1989 ಮತ್ತು ನಿಯಮ 11 ಸಿಸಿಎ ನಿಯಮಾವಳಿಗಳಂತೆ ಇಲಾಖಾ ವಿಚಾರಣಾ ಕಡತಗಳ ನಿರ್ವಹಣೆ.
2. ನಿಯಮ 7 ಕೆಎಸ್‌ಪಿ (ಡಿಪಿ) ನಿಯಮಾವಳಿಗಳು 1965/1989 ಮತ್ತು ನಿಯಮ 12 ಸಿಸಿಎ ನಿಯಮಾವಳಿಗಳಂತೆ ಶಿಸ್ತು ಕ್ರಮ ಕಡತಗಳ ನಿರ್ವಹಣೆ.
3. ನಿಯಮ 6 ಕೆಎಸ್‌ಪಿ (ಡಿಪಿ) ನಿಯಮಾವಳಿಗಳು 1965/1989 ಮತ್ತು ನಿಯಮ 11 ಸಿಸಿಎ ನಿಯಮಾವಳಿಗಳಂತೆ ಇಲಾಖಾ ವಿಚಾರಣಾ ಮೇಲ್ಮನವಿ ಕಡತಗಳ ನಿರ್ವಹಣೆ.
4. ನಿಯಮ 7 ಕೆಎಸ್‌ಪಿ (ಡಿಪಿ) ನಿಯಮಾವಳಿಗಳು 1965/1989 ಮತ್ತು ನಿಯಮ 12 ಸಿಸಿಎ ನಿಯಮಾವಳಿಗಳಂತೆ ಶಿಸ್ತು ಕ್ರಮ ಮೇಲ್ಮನವಿ ಕಡತಗಳ ನಿರ್ವಹಣೆ.
5. ಇಲಾಖಾ ವಿಚಾರಣೆ/ಶಿಸ್ತು ಕ್ರಮಗಳ ಮಾಸಿಕ/ತ್ರೈಮಾಸಿಕ/ಅರ್ಧ ವಾರ್ಷಿಕ ತ:ಖ್ತೆಗಳನ್ನು ತಯಾರಿಸುವುದು.
6. ಅಮಾನತ್ತಿಗೆ ಸಂಬಂಧಪಟ್ಟ ಕಡತಗಳ ನಿರ್ವಹಣೆ.
7. ಎಲ್ಲಾ ತರಹದ ದೂರು ಅರ್ಜಿಗಳ ಮತ್ತು ದೂರು ಅರ್ಜಿ ವಹಿ ನಿರ್ವಹಣೆ.
8. ಅನಧಿಕೃತವಾಗಿ ಗೈರು ಹಾಜರಾಗುವವರ ವಿರುದ್ಧ ಅಭಿತ್ಯಾಜ ಪತ್ರ ಹೊರಡಿಸುವ ಪತ್ರ ವ್ಯವಹಾರಗಳು.
9. ಸಿಬ್ಬಂದಿ–3 ಶಾಖೆಗೆ ಸಂಬಂಧಿಸಿದ ಕೆಎಟಿ/ಉಚ್ಚ ನ್ಯಾಯಾಲಯ ಪ್ರಕರಣಗಳ ಮತ್ತು ಮಾಹಿತಿ ಹಕ್ಕು ಅಧಿನಿಯಮ–2005ರ ಪ್ರಕರಣಗಳ ಪತ್ರ ವ್ಯವಹಾರಗಳು ಮತ್ತು ಕಡತಗಳ ನಿರ್ವಹಣೆ.
10. ಕಮಾಂಡೆಂಟ್/ಎಎಒ/ಶಾಖಾಧೀಕ್ಷಕರು ವಹಿಸುವ ಇತರೆ ಕರ್ತವ್ಯಗಳನ್ನು ನಿರ್ವಹಿಸುವುದು.

